—: ಶ್ರೀಃ :—

# ಯಾದವಗಿರಿ ತಿರುನಾರಾಯಣ ಪುರದ—

# (ಮೇಲುಕೋಟೆ) ಯಾತ್ರೆಯ

## ವಿಷಯಾನುಕ್ರಮಣಿಕೆ.



## ಮೊದಲನೆಯ ಅಧ್ಯಾಯವು.

# ಎರಡನೆಯ ಅಧ್ಯಾಯವು.

ವನ್ನು ಪರಿಸಿ, ಶ್ರೀಶನ ಸೇವೆಯಂ ಭಕ್ತಿಯಿಂದ ಮಾಡಿ ಕೃತಾರ್ಥರಾಗಲು ಪ್ರಾರ್ಥಿಸುವೆನು

ಈ ಪುಸ್ತಕದ ಬರವಣಿಗೆಯಲ್ಲಿ ಲೋಪದೋಷಗಳಿದ್ದಲ್ಲಿ ಗುಣಗ್ರಾಹಿಗಳು ಅವುಗಳನ್ನು ಉದ್ಘೋಷಿಸಿ ಅಜ್ಞನಾದ ದಾಸನಿಗೆ ಮುಂದಣ ಮುದ್ರಣದಲ್ಲಿ ಸರಿಪಡಿಸಿಕೊಳ್ಳಲು ಮಾರ್ಗದರ್ಶಿಗಳಾಗಿರಲು ವಿನಯದಿಂದ ಬೇಡುವೆನು

ಈ ಪುಸ್ತಕವನ್ನು ಪ್ರಚುರಗೊಳಿಸಲು ಸಹಾಯಮಾಡಿದ ಮಹನೀಯರುಗಳಿಗೆ ಕೃತಜ್ಞನಾಗಿರುವೆನು

ಅರಸೀಕೆರೆ<br>
ತಾ|| ೮—೯—೩೪

ಇತಿ ಸಜ್ಜನ ವಿಧೇಯ,<br>
**ಶ್ರೀ. ರಾಮಾನುಜೈಯ್ಯಂಗಾರ್ಯ.**



|| ಶ್ರೀರಸ್ತು ||

## ಶ್ರೀಯೈ ನಮಃ

## ಶ್ರೀಮತೇ ರಾಮಾನುಜಾಯ ನಮಃ

## ಶ್ರೀ ಯದುಗಿರಿ ನಾರಾಯಣಾಯ ಪರಬ್ರಹ್ಮಣೇ ನಮಃ

# —:ಅವತಾರಿಕೆ:—

ಶ್ರಿಯಃಪತಿಯಾಗಿಯೂ, ಪರಮಕಾರುಣಿಕನಾಗಿಯೂ, ಜ್ಞಾನಾತ್ಮಕನಾಗಿಯೂ, ಅವ್ಯಕ್ತಸ್ವರೂಪನಾಗಿಯೂ, ಸರ್ವಾಂತರಾತ್ಮನಾಗಿಯೂ, ಆಕಾಶಶರೀರಿಯಾಗಿಯೂ, ಕಲ್ಯಾಣಗುಣಪೂರ್ಣನಾಗಿಯೂ ಮತ್ತು ಸರ್ವೇಶ್ವರನಾಗಿಯೂ ಇರುವ ಶ್ರೀಮನ್ನಾರಾಯಣನು, ಸಂಸಾರ ಸಮುದ್ರದಲ್ಲಿ ಮುಳುಗಿ ಕಷ್ಟಪಡುತ್ತಿರುವ ಚೇತನರನ್ನು ಉದ್ಧರಿಸಲು ಇಷ್ಟವುಳ್ಳವನಾಗಿ, ಅವರಿಗೆ ಕರಣ ಕಳೇಬರಗಳನ್ನೂ, ಸುಜ್ಞಾನವನ್ನೂ, ಅನುಗ್ರಹಿಸಿದನು ಇಂತಹ ಪ್ರಾಣಿಕೋಟಿಗಳನ್ನು ಉದ್ಧರಿಸಲು, ಕರ್ಮಾಧೀನವಾದ ಉತ್ಪತ್ತಿಯಿಲ್ಲದ ಭಗವಂತನು, ಲೋಕಕ್ಷೇಮಾರ್ಥವಾಗಿ ಸ್ವೇಚ್ಛೆಯಿಂದ ಅನೇಕ ಪೂರ್ಣಾವತಾರಗಳನ್ನೆತ್ತಿ, ಈ ಭೂಮಂಡಲವಂ ಪಾವನವನ್ನಾಗಿ ಮಾಡಿದ ಅಂಶವು ಅನೇಕ ಪುರಾಣೇತಿಹಾಸಾದಿ ದಿವ್ಯ ಗ್ರಂಥಗಳಿಂದ ವ್ಯಕ್ತವಾಗುತ್ತಲಿರುವುದು ಅಲ್ಲದೆ ಶ್ರೀಮನ್ನಾರಾಯಣನ ಅಂಶಭೂತರಾದ ಶಂಖ, ಚಕ್ರಾದ್ಯಾಯುಧಗಳೂ, ನಿತ್ಯಸೂರಿಗಳಾದ ಅವನ ಭಕ್ತರೂ, ಯೋನಿಜರಾಗಿಯೂ, ಅಯೋನಿಜರಾಗಿಯೂ ಆಯಾಯ ಯುಗಗಳಿಗೆ ಅನುಸಾರವಾಗಿ ಅವತರಿಸಿ, ಸನಾತನ ಧರ್ಮವನ್ನೂ ಉಪದೇಶಿಸಿ ತಾವೂ ಅನುಷ್ಠಿಸಿ **ಶರಶ್ಚಂದ್ರನಂತೆ ಅತಿ ಧವಳಾಂಗನಾದ** ಪದ್ಮಲೋಚನನಾದ, ಶ್ರೀ ಭೂ ನೀಳಾ ಸಂಸೇವ್ಯಪಾರ್ಶ್ವನಾದ ಶ್ರಿಯಃ

ಪತಿಯನ್ನು ಸೇವಿಸಿ ಧನ್ಯರಾದುದಲ್ಲದೆ, "ಈ ಕಲಿಯುಗದಲ್ಲಿ ಕಲಾವತ್ರಾಪಿ ದೋಷಾಢ್ಯೆ ವಿಷಯಾಸಕ್ತಮಾನನಃ । ಕೃತ್ವಾಪಿ ಸಕಲಂ ಪಾಪಂ ಗೋವಿಂದಂ ಸಂಸ್ಮರೇ ಶುಚಿಃ॥" ಎಂಬಂತೆ, ಭಗವನ್ನಾಮ ಸಂಕೀರ್ತನವು ಒಂದೇ ಸುಲಭವಾದ ಮುಖ್ಯಸಾಧನವೆಂದೂ, ಉಪದೇಶಿಸಿದರು.

ಕಲಿಪ್ರಾಚುರ್ಯದಿಂದ, ಲೋಕದಲ್ಲ ತಪಸ್ಸಿನಿಂದಲೂ, ಯೋಗಾಭ್ಯಾಸದಿಂದಲೂ, ಲಭ್ಯವಾಗದ ನಿರತಿಶಯಗಳಾದ ಮಹಾಫಲಗಳಲ್ಲವೂ "ಕಲೌಸಂಕೀರ್ತ್ಯ ಕೇಶವಂ" ಎಂಬಂತೆ ಈ ಕಲಿಕಾಲದಲ್ಲಿ ಸರ್ವ ಹೃದಯಾಂತರ್ಯಾಮಿಯಾದ ಶ್ರೀಮನ್ನಾರಾಯಣನ ದಿವ್ಯ ಕಲ್ಯಾಣಗುಣ ಕೀರ್ತನೆಯಿಂದಲೇ ಲಭಿಸುವುವು ಸರ್ವಾಂತರ್ಯಾಮಿಯಾಗಿ, ಸರ್ವಜ್ಞನಾಗಿರುವ ಶ್ರೀಮನ್ನಾರಾಯಣನು, ತೈಲಧಾರಯಂತೆ ಅವಿಚ್ಛಿನ್ನವಾದ ಭಕ್ತಿಯಿಂದಲ್ಲದ ಕೇವಲ ತಪಸ್ಸಿನಿಂದಲೂ, ಸತ್ಕರ್ಮದಿಂದಲೂ, ಸಾಧ್ಯನಾಗಲಾರನು ಇಂತಹ ಕಾಲದಲ್ಲ ಭಗವನ್ನಾಮ ಸಂಕೀರ್ತನೆಗೆ ಭಕ್ತಿಯೇ ಪ್ರಧಾನವು ಮತ್ತು ಮುಕ್ತಿಪ್ರದವು ಈ ಕಲಿಯಲ್ಲ ಮನುಷ್ಯನು ತನ್ನ ಮನಸ್ಸನ್ನು ತಡೆಯುವುದು ಅಸಾಧ್ಯವಾದುದರಿಂದಲೂ, ಇವನ ಆಯುಃಪರಿಮಾಣವೂ ಬಹಳ ಸ್ವಲ್ಪವಾಗಿದ್ದು, ಅದೂ ತಾಪತ್ರಯೋಪಹತವಾಗಿರುವುದರಿಂದಲೂ, ಇವರ ಪರಿಹಾರಕ್ಕಾಗಿಯೇ, ಭಕ್ತವತ್ಸಲನಾಗಿ ಭಕ್ತೋದ್ಧರಣಾರ್ಥವಾಗಿಯೇ, ಅವತರಿಸಿದಂಥ ಮತ್ತು ನಿತ್ಯಸೂರಿಗಳಿಂದಲೂ, ಬ್ರಹ್ಮರ್ಷಿಗಳಿಂದಲೂ ಯತಿರಾಜರೇ ಮುಂತಾದವರುಗಳಿಂದಲೂ ಆರಾಧಿಸಲ್ಪಟ್ಟ, ಯದುಗಿರೀಶನಾಗಿ, ಸರ್ವಲಕ್ಷಣೈಕಸಂಕಲ್ಪನಾದ ಶ್ರೀಮನ್ನಾರಾಯಣನನ್ನು, ವಿಷಯಾಭಿಲಾಷೆಯನ್ನು ಬಿಟ್ಟು, ನಿರ್ಮತ್ಸರರಾದ ಸತ್ಪುರುಷರು ಭಕ್ತಿಯಿಂದ ಸೇವಿಸಿ ನಿಷ್ಕಳಂಕವಾದ ಮನಸ್ಸಿನಿಂದ ಆತನನ್ನು ಸ್ತುತಿಸಿ, ನಮಿಸಿ, ಕೃತಾರ್ಥರಾಗಿ, ಕೊನೆಗೆ ಪರಮಪದವೆಂಬ ಮೋಕ್ಷಸಾಮ್ರಾಜ್ಯವನ್ನು ಪಡೆಯಬೇಕೆಂಬುದೇ, ಈ ಗ್ರಂಥದ ಉದ್ದೇಶ್ಯವಾಗಿರುವುದು,

ಇದಕ್ಕೆ ದೃಷ್ಟಾಂತವಾಗಿ ಯದುಗಿರೀಶನಾದ ಶ್ರಿಯಃಪತಿಯನ್ನು, ಭಕ್ತಿಪೂರ್ವಕವಾಗಿ ಆರಾಧಿಸಿ, ತಮ್ಮ ಶಿಷ್ಯಕೋಟಿಯು ಕೃತಾರ್ಥರಾಗಲು

ಅವಕಾಶವನ್ನು ಕಲ್ಪಿಸಿದ ಶ್ರೀಮದ್ವಿಶಿಷ್ಟಾದ್ವೈತ ಸಿದ್ಧಾನ್ತ ಸ್ಥಾಪನಾಚಾರ್ಯರಾದ ಶ್ರೀ ರಾಮಾನುಜಾಚಾರ್ಯರ ಚರಿತ್ರವನ್ನು, ಸಂಗ್ರಹಿಸಿ ಈ ಪುಸ್ತಕದಲ್ಲಿ ಅಡಕಮಾಡಿರುತ್ತದೆ

ಭಾಗವತೋತ್ತಮರು ಇದನ್ನು ಪಠಿಸಿ ಮನನ ಮಾಡಿ ಇಷ್ಟ ಮಿತ್ರ ಬಂಧುವರ್ಗಗಳಲ್ಲಿ ಇದನ್ನು ಪ್ರಕಾಶಗೊಳಿಸುವುದರ ಮೂಲಕ ನನ್ನ ಪ್ರಯತ್ನವನ್ನು ಸಾರ್ಥಕಪಡಿಸಬೇಕೆಂದು ದಾಸನ ಪ್ರಾರ್ಥನೆಯು

**ಗ್ರಂಥಕರ್ತ.**



॥ ಶ್ರೀ ॥

ಶ್ರೀಮತೇ ರಾಮಾನುಜಾಯ ನಮಃ

## ಶ್ರೀಮದ್ವಿಶಿಷ್ಟಾದ್ವೈತ ಸಿದ್ಧಾನ್ತ ಸ್ಥಾಪನಾಚಾರ್ಯರಾದ

# ಶ್ರೀ ರಾಮಾನುಜಾಚಾರ್ಯರ ದಿವ್ಯ ಚರಿತ್ರ ಸಂಗ್ರಹವು

---

ಯೋನಿತ್ಯ ಮಚ್ಯುತಪದಾಂಬುಜಯುಗ್ಮ ರುಕ್ಮ
ವ್ಯಾಮೋಹತಸ್ತದಿತರಾಣಿ ತೃಣಾಯ ಮೇನೇ ।
ಅಸ್ಮದ್ಗುರೋರ್ಭಗವತೋಽಸ್ಯ ದಯೈಕಸಿಂಧೋಃ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೈ ॥

"ಚೈತ್ರಾರ್ದ್ರಾ ಸಂಭವಂ ವಿಷ್ಣೋರ್ದರ್ಶನ ಸ್ಥಾಪನೋತ್ಸುಕಂ। ತುಂಡೀರ ಮಂಡಲೇ ಶೇಷ ಮೂರ್ತಿಂ ರಾಮಾನುಜಂ ಭಜೇ॥" ಎಂಬಂತೆ ಶ್ರೀಮದ್ವಿಶಿಷ್ಟಾದ್ವೈತಮತ ಸ್ಥಾಪಕರಾದ ಶ್ರೀ ರಾಮಾನುಜಾಚಾರ್ಯರವರು ಚೈತ್ರ ಮಾಸ, ಆರಿದ್ರಾ ನಕ್ಷತ್ರದಲ್ಲಿ ಶ್ರೀವಿಷ್ಣುವಿನ ಆದಿಶೇಷಾಂಶರಾಗಿ ಅವತರಿಸಿದರೆಂದು ಜಗತ್ಪ್ರಸಿದ್ಧವಾಗಿದೆ ಈ ಮಹನೀಯರು ಮದ್ರಾಸಾಧಿಪತ್ಯದ ಚಂಗಲ್ಪಟ್ಟು ಡಿಸ್ಟ್ರಿಕ್ಟಿನ ಶ್ರೀ ಪೆರಂಬೂಧೂರ್ ಎಂಬ ದಿವ್ಯಸ್ಥಳದಲ್ಲಿ, ಪರಮಭಕ್ತರೂ ಮತ್ತು ಪರಮಾಸ್ತಿಕಶಿರೋಮಣಿಯೂ ಆಗಿದ್ದ "ಕೇಶವ ಸೋಮಯಾಜಿ" ಎಂಬ ಬ್ರಾಹ್ಮಣರಿಗೆ, ಪತ್ನಿಯಾದ ಕಾಂತಮತಿ ಎಂಬ ಪತಿವ್ರತೆಯಲ್ಲಿ ಶಾ॥ ಶ॥ ೯೩೯ (ಕ್ರಿ॥ ಶ॥ ೧೦೧೭) ರಲ್ಲಿ ಪುತ್ರರತ್ನರಾಗಿ ಅವತರಿಸಿದರು ಇವರಿಗೆ ಸೋದರಮಾವನಾಗಿದ್ದ ಶ್ರೀಶೈಲಪೂರ್ಣರು ( ಮಹಾಪೂರ್ಣರು ಅಥವ ಪೆರಿಯ ತಿರುಮಲೆ ನಂಬಿ )

“ರಾಮಾನುಜ” ಅಥವ “ಇಳೆಯಪೆರುಮಾಳ್” ಎಂಬುದಾಗಿ ಇವರಿಗೆ ನಾಮಕರಣವಂ ಮಾಡಿಸಿದರು ಕೇಶವಸೋಮಯಾಜಿಗಳು ಮಹಾ ತೇಜಸ್ವಿಯಾದ ಇವರಿಗ ಜಾತಕರ್ಮಾದಿ ಮೊದಲಾದ ಸಂಸ್ಕಾರಗಳಂ ಮಾಡಿ ಇವರು ವಿದ್ಯಾ ಪಾರಂಗತರಾದ ತರುವಾಯ ಹದಿನಾರನೆಯ ವರುಷದಲ್ಲಿ “ತಂಜಮ್ಮಾಳ್” ಎಂಬ ಕನ್ಯೆಯನ್ನು ತಂದು ವಿವಾಹವನ್ನು ಬೆಳೆಸಿದರು

ಶ್ರೀ ರಾಮಾನುಜಾಚಾರ್‍ಯರೂ ಮತ್ತು ಇವರ ಚಿಕ್ಕಮ್ಮ ದಾಂತಿಮತಿಯ ಮಗನಾದ ಗೋವಿಂದಭಟ್ಟರೂ, ಕಂಚಿಯಲ್ಲಿ ವಾಸವಾಗಿದ್ದುಕೊಂಡು, ಕೇಶವ ಸೋಮಯಾಜಿಗಳಲ್ಲಿ ಶಾಸ್ತ್ರ ಅಧ್ಯಯನಕ್ಕೆ ಪ್ರಾರಂಭಿಸಿ ತಮ್ಮ ಹದಿನಾರನೆಯ ವರುಷದಲ್ಲಿ ಎಲ್ಲಾ ವೇದವೇದಾಂತಗಳನ್ನೂ ಕಲಿತರು ತರುವಾಯ ಕಂಚಿಯಲ್ಲಿ ಅನೇಕ ಮಂದಿ ಶಿಷ್ಯರಿಗೆ ವೇದಾಂತವನ್ನು ಹೇಳುತ್ತಲಿದ್ದ ಅದ್ವೈತ ಸನ್ಯಾಸಿಯಾಗಿದ್ದ ಯಾದವ ಪ್ರಕಾಶರ ಬಳಿ ವ್ಯಾಸಂಗಮಾಡತೊಡಗಿದರು ಕೆಲವು ಕಾಲಾನಂತರ ಯಾದವಪ್ರಕಾಶರು ಶ್ರುತಿವಾಕ್ಯಗಳಿಗೆ ಹೇಳಿದ ಅರ್ಧಗಳು ರಾಮಾನುಜಾಚಾರ್ಯರಿಗೆ ಸರಿಹೋಗದಿರಲು ವಾಕ್ಯಾರ್ಥಮಾಡುವ ಸಂಭವದಲ್ಲಿ ಗುರುವಿಗೂ, ಅದ್ಭುತಮೇಧಾವಿಯಾಗಿದ್ದ ಶಿಷ್ಯರಿಗೂ ವಿವಾದಗಳು ಹುಟ್ಟಿ ವಿರಸವುಂಟಾಯಿತು ಗುರುವರ್ಯರು, ರಾಮಾನುಜಾಚಾರ್ಯರಲ್ಲಿ ನೈಷ್ಠುರ್ಯದಿಂದ ಪ್ರಯೋಜನವಿಲ್ಲವೆಂದೂ, ಇವರಿಂದ ತಮ್ಮ ಮತವು ಕ್ಷೀಣವಾಗುವುದಂದೂ, ಯೋಚಿಸಿ ಗಂಗಾಸ್ನಾನದ ವ್ಯಾಜದಿಂದ ಕರೆದುಕೊಂಡು ಹೋಗಿ, ಇವರನ್ನು ನದೀಪಾಲುಮಾಡಬೇಕಂದು ಆಪ್ತಶಿಷ್ಯರೊಂದಿಗೆ ಯೋಚಿಸಿ, ಕೆಲವು ದಿವಸಗಳ ಕಾಲ ಪಾರಪ್ರವಚನವನ್ನು ಮಾಡುತ್ತ, ತರುವಾಯ ಒಂದು ದಿವಸ ಗಂಗಾಯಾತ್ರೆಗೋಸ್ಕರ ರಾಮಾನುಜಾಚಾರ್ಯರ ಮತ್ತು ಇತರ ಶಿಷ್ಯರ ಸಮೇತರಾಗಿ ಪ್ರಯಾಣಬೆಳಸಿದರು ಬಹು ದೂರ ಹೋದಮೇಲೆ ವಿಂಧ್ಯಾರಣ್ಯವೆಂಬ ಒಂದು ಮಹಾರಣ್ಯದಲ್ಲಿ ರಾಮಾನುಜಾಚಾರ್ಯರು ಶೌಚಾಚಾರಕ್ಕೋಸ್ಕರ ನಿಂತರು ಗೋವಿಂದಭಟ್ಟರು ಸನ್ಯಾಸಿಯ ದುರಾಲೋಚನೆಯನ್ನು ಬಹಿರಂಗಪಡಿಸಿ ಆಚಾರ್ಯರನ್ನು ಹಿಂತಿರುಗಲು ತಿಳಿಸಿ, ತಾವು ಜಾಗ್ರತೆಯಾಗಿ ಶಿಷ್ಯಮಂಡಲಿಯೊ

ಡನೆ ನೇರಿಕೊಂಡು ಮುಂದರಿವರು. ಆಚಾರ್ಯರು ಒಂಟಿಯಾಗಿದ್ದು ನಿಶಿಯಲ್ಲಿ ಮಾರ್ಗ ತಿಳಿಯದೆ ಚಿಂತಾಕ್ರಾಂತರಾಗಿ, ಭಯಗೊಂಡು ಕತ್ತಲೆಯಲ್ಲಿ ಕಲ್ಲುಮುಳ್ಳುಗಳನ್ನು ತುಳಿದು ಬಹಳ ಘಾಸಿಯಾದವರು ತರುವಾಯ ತಮ್ಮ ಎರಡು ಕೈಗಳನ್ನು ಜೋಡಿಸಿ ಭಕ್ತಿಯುತರಾಗಿ ತನ್ನನ್ನು ಕಾಪಾಡಲು ಕರುಣಾನಿಧಿಯಾದ ಭಗವಂತನನ್ನು ಪ್ರಾರ್ಥಿಸಿದರು

ಆಗ, ಆಪದ್ಭಂಧುವೂ, ಮತ್ತು ಅನಾಥರಕ್ಷಕನೂ ಆದ ಶ್ರೀ ವರದರಾಜನು, ಶ್ರೀ ಪೆರಂದೇವಿಯಮ್ಮನವರೊಡನೆ, ಬೇಡಬೇಡತಿಯರ ವೇಷವನ್ನು ಧರಿಸಿ, ಆ ಮಾರ್ಗವಾಗಿ ಚಿತ್ತೈಸುತ್ತಿರುವುದನ್ನು ಕಂಡರು. ಶ್ರೀಮದಾಚಾರ್ಯರು ಈ ದಂಪತಿಗಳನ್ನು ಕುರಿತು "ಎಲ್ಲಿಗೆ ಹೋಗುವಿರಂ"ದು ಕೇಳಲು, ಅವರು ಕಂಚಿಗೆ ಹೋಗುವುದಾಗಿ ಅಪ್ಪಣೆಯನ್ನಿತ್ತರು ರಾಮಾನುಜಾಚಾರ್ಯರೂ ತಮ್ಮನ್ನು ಜೊತೆಯಲ್ಲಿ ಕರದುಕೊಂಡು ಹೋಗಲು ಬೇಡಿಕೊಂಡುದರ ಮೇಲೆ, ಅವರು ಮಾರ್ಗವನ್ನು ತೋರಿಸುತ್ತಾ ಹೊರಟರು ದಾರಿಯಲ್ಲಿ ಬೇಡತಿಯು ಬಾಯಾರಿಕೆಯಿಂದ ನೀರನ್ನು ಬೇಡಲು, ಬೇಡರವನು ಇಲ್ಲಿಯೇ ಬಾವಿ ಇರುವುದೆಂದನು. ಇದನ್ನು ಕೇಳಿ ರಾಮಾನುಜಾಚಾರ್ಯರು, ಉಪಕಾರಮಾಡಿದ ಇವಂಗೆ ನೀರನ್ನು ತಂದುಕೊಡುವುದಾಗಿ ಹೇಳಿ, ಬಾವಿಯಲ್ಲಿಳಿದು (ಶಾಲೆಕ್ಕಿಣರ್) ನೀರನ್ನು ತುಂಬಿ ತಂದುಕೊಟ್ಟರು ಆ ದಿವ್ಯ ದಂಪತಿಗಳೂ ನೀರನ್ನು ಕುಡಿದು "ಪುಣ್ಯಕೋಟಿ ವಿಮಾನವು ಇಲ್ಲಯೇ ಇರುವುದು ನೋಡಿರಂ"ದು ಹೇಳಿ ಅಂತರ್ಧಾನವಾದರ, ಸದಾಚಾರ ಸಂಪನ್ನರಾದ ರಾಮಾನುಜಾಚಾರ್ಯರು ಇದನ್ನು ನೋಡಿ ಪರಮಾಶ್ಚರ್ಯಯುತರಾಗಿ, ವಿಂಧ್ಯಾಟವಿಯಿಂದ ಶೀಘ್ರದಲ್ಲಿ ಕರತಂದು ಪ್ರಾಣಾಪಾಯದಿಂದ ತಪ್ಪಿಸಿ ರಕ್ಷಿಸಿದ ಶ್ರೀ ವರದರಾಜನನ್ನು, ಪ್ರತಿನಿತ್ಯವೂ ಭಕ್ತಿಪುರಸ್ಸರವಾಗಿ ಸೇವಿಸುತ, ಸ್ವಾಮಿಗೆ ತಿರುಮಂಜನ ಕೈಂಕರ್ಯವಂ ಮಾಡುತಲಿದ್ದರು

ಯಾದವ ಪ್ರಕಾಶಕರು ಹಿಂದುಳಿದ ಶ್ರೀ ರಾಮಾನುಜಾಚಾರ್ಯರನ್ನು ಹುಡುಕಿ ಕಾಣದೇಹೋದುದರಿಂದ, ದೈವಯೋಗದಿಂದ ಅಡವಿಯುಪಾಲಾಗಿ ಮೃತಪಟ್ಟರಬೇಕೆಂದು ಎಣಿಸಿ ಸಂತಸಗೂಂಡು, ಬಹಿರಂಗವಾಗಿ ವ್ಯಸನ

ವನ್ನು ತೋರ್ಪಡಿಸುತ್ತ,—ಗಂಗಾತೀರವನ್ನು ಸೇರಿ, ಸ್ನಾನಾದಿಗಳನ್ನು ಮುಗಿಸಿಕೊಂಡು, ಶಿಷ್ಯರೊಡನೆ ಕಂಚಿಗೆ ಹಿಂದಿರುಗಿದರು. ರಾಮಾನುಜಾಚಾರ್ಯರು ಶ್ರೀ ವರದನ ಕೈಂಕರ್ಯದಲ್ಲಿ ನಿರತರಾಗಿರುವುದನ್ನು ಯಾದವ ಪ್ರಕಾಶರು ತಿಳಿದು, ಬಾಹ್ಯವಾಗಿ ಸಂತೋಷಗೊಂಡವರಂತೆ ನಟಿಸುತ್ತಾ. ರಾಮಾನುಜರನ್ನು ಕುರಿತು "ನೀವು ಕಾಡುಪಾಲಾಗಿ ದುಷ್ಟಮೃಗಗಳಿಗೆ ತುತ್ತಾದಿರೆಂದು ನಂಬಿದ್ದೆನು, ದೈವಾನುಗ್ರಹದಿಂದ ಸುಖವಾಗಿ ಹಿಂತಿರುಗಿದಿರಿ" ಎಂದು ಹೇಳಿದರು. ಇದರಿಂದ ಲಜ್ಜಾಯುತರಾದ ಸನ್ಯಾಸಿಗೆ ಅಸೂಯೆಯು ಹೆಚ್ಚಿದಾಗಲೂ ಬಹಿರಂಗಪಡಿಸದೆ, ಪುನಃ ಇವರಿಗೂ ಶಾಸ್ತ್ರಾಭ್ಯಾಸವನ್ನು ಮಾಡಿಸುತಲಿದ್ದರು ಮತ್ತೊಂದು ದಿನ ಯಾದವ ಪ್ರಕಾಶರು "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿ ವಚನಕ್ಕೆ ಅದ್ವೈತ ಪರವಾಗಿ ಅರ್ಥವನ್ನು ಹೇಳಲು ಶ್ರೀ ರಾಮಾನುಜಾಚಾರ್ಯರು ಅದನ್ನು ನಿರಾಕರಿಸಿ ಶ್ರೀ ವಿಶಿಷ್ಟಾದ್ವೈತ ಪರವಾದ ಅರ್ಥವನ್ನು ಹೇಳಿದರು ಇದನ್ನು ಕೇಳಿ ಸನ್ಯಾಸಿಯು ಕುಪಿತರಾಗಿ ಶಿಷ್ಯನನ್ನು ಪಾಠಕ್ಕೆ ಬರಕೂಡದೆಂದು ಅಪ್ಪಣೆಯನ್ನಿತ್ತರು ಆಚಾರ್ಯವರ್ಯರು ಅವರಲ್ಲಿ ಶಾಸ್ತ್ರಾಭ್ಯಾಸ ಮಾಡುವುದಂ ಬಿಟ್ಟು, ಶ್ರೀ ವರದರಾಜನ ತಿರುಮಂಜನ ಸೇವೆಯಲ್ಲಿ ನಿರತರಾಗಿದ್ದರು ಇದನ್ನು ತಿಳಿದ ಯಾಮುನಾಚಾರ್ಯರು (ಆಳವಂದಾರ್) ಇವರ ಪ್ರಭಾವವನ್ನು ಕೊಂಡಾಡುತಲಿದ್ದರು.

ಹೀಗಿರುವಲ್ಲಿ ಶ್ರೀರಂಗದಲ್ಲಿ ಇದ್ದ ಆಳವಂದಾರವರಿಗೆ ದೇಹಾಯಾಸ ಉಂಟಾಗಲು, ಆ ವೇಳೆಗೆ ಕಂಚಿಯಿಂದ ಶ್ರೀವೈಷ್ಣವರಿಬ್ಬರು ಬಂದು ಯಾಮುನಾಚಾರ್ಯರನ್ನು ವಂದಿಸಲು, ಅವರು ಆ ಇಬ್ಬರನ್ನು ನೋಡಿ, ಇಳೆಯಾಳ್ವಾರರ (ರಾಮಾನುಜಾಚಾರ್ಯರ) ಯೋಗಕ್ಷೇಮವನ್ನು ವಿಚಾರಿಸಿದರು ಆ ಬ್ರಾಹ್ಮಣರು ರಾಮಾನುಜಾಚಾರ್ಯರು ಯಾದವ ಪ್ರಕಾಶರನ್ನು ಬಿಟ್ಟು, ಶ್ರೀ ಸ್ವಾಮಿಯನ್ನು ಸೇವಿಸುತ್ತಿರುವ ಸಂಗತಿಯನ್ನು ಅರುಹಿದರು ಇದನ್ನು ಕೇಳಿ ಆಳವಂದಾರರು ತಾವು ಭಗವಂತನಲ್ಲಿ ಮಾಡಿಕೊಂಡ ಪ್ರಪತ್ತಿಯು ಸಫಲವಾಯಿತೆಂದು ಸಂತಸಗೊಂಡು, ರಾಮಾನುಜಾಚಾರ್ಯರನ್ನು ಕರೆತರುವಂತೆ ಪೆರಿಯನಂಬಿಗಳಿಗೆ (ಮಹಾಪೂರ್ಣರು)

ನಿಯಮಿಸಿದರು. ಅವರು ಅದರಂತೆ ಕಂಚಿಗೆ ಬಂದು ರಾಮಾನುಜಾಚಾರ್ಯರಿಗೆ ತಿಳಿಸಲಾಗಿ ಅವರು ಶ್ರೀ ವರದನಿಗೆ (ನಲ್ಲಾಂ ಚಕ್ರವರ್ತಿ) ತೀರ್ಥಸಮರ್ಪಣೆಯಂ ಮಾಡಿ, ಅನುಜ್ಞೆಯನ್ನು ಪಡೆದು, ಪ್ರಯಾಣೋನ್ಮುಖರಾದರು

ಇತ್ತ ಶ್ರೀರಂಗದಲ್ಲಿ ಆಳವಂದಾರರು ಶಿಷ್ಯ ಸಮೇತರಾಗಿ ಶ್ರೀರಂಗನಾಥನನ್ನು ಸೇವಿಸಿ, ತೀರ್ಥವನ್ನು ಸ್ವೀಕರಿಸಿ ನಿಂತಿರಲು ಸ್ವಾಮಿಯು ಅರ್ಚಕಮುಖದಿಂದ, ಅವರನ್ನು ಪರಮಪದವನ್ನೈದುವಂತೆ ಆಜ್ಞಾಪಿಸಿದನು ಅನಂತರ ಯಾಮುನಾಚಾರ್ಯರು ಮಠಕ್ಕೆ ಬಂದು, ಇಳೆಯಾಳ್ವಾರರು, ಇನ್ನೂ ಕಂಚಿಯಿಂದ ಬಾರದುದಕ್ಕಾಗಿ, ವ್ಯಥಗೊಂಡು, ರೋದಿಸತೊಡಗಿ ತಮ್ಮ ಸ್ವಾಚಾರ್ಯರಾದ ಮಣಕ್ಕಾಲ್ ನಂಬಿಗಳ ಪಾದುಕೆಗಳನ್ನಾರಾಧಿಸಿ, ತೀರ್ಥವನ್ನು ಸ್ವೀಕರಿಸಿ, ತಮ್ಮ ಶ್ರೀಪಾದತೀರ್ಥವನ್ನೂ, ಪಾದುಕೆಯನ್ನೂ ಶಿಷ್ಯರಿಗೆ ಕೊಟ್ಟು ಅವರೆಲ್ಲರೂ ಉಪನಿಷದನುಸಂಧಾನವನ್ನು ಮಾಡುತ್ತಿರಲು, ತಾವು ಆಚಾರ್ಯರ ತಿರುವಡಿಗಳನ್ನು ಧ್ಯಾನಿಸುತ್ತಾ ಬ್ರಹ್ಮರಂಧ್ರಮುಖೇನ ಪರಮಪದವನ್ನೈದಿದರು ಇದೇ ಕಾಲದಲ್ಲಿ ಆಳವಂದಾರ್ರವರು ವ್ಯಾಸಸೂತ್ರಕ್ಕೆ ಯೋಗ್ಯವಾದ ಭಾಷ್ಯವನ್ನು ಮಾಡಿ, ವೇದಸಾರವಾದ ತಿರುವಾಯಿಮೊಳಿ ಎಂಬ ಪ್ರಬಂಧವನ್ನೂ, ತಿರುಮಂತ್ರಾರ್ಥವನ್ನೂ ಸಚ್ಛಿಷ್ಯನಿಗೆ ಉಪದೇಶಿಸಿ ತನ್ಮೂಲಕ ಶ್ರೀ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಉದ್ದೇಶ್ಯವು ನೆರವೇರದುದರಿಂದ, ಈ ಕೊರತೆಯಲ್ಲಿಯೇ ತಮ್ಮ ಮೂರು ಬೆರಳುಗಳನ್ನು ಮಡಿಸಿಕೊಂಡು ದೈವಾಧೀನರಾದರು ಆಗ ತಿರುವರಂಗಪ್ಪೆರುಮಾಳರೇ ಮೊದಲಾದ ಶಿಷ್ಯರು ಯತಿಸಂಸ್ಕಾರವನ್ನು ವಿಧ್ಯುಕ್ತಪ್ರಕಾರವಾಗಿ ನೆರವೇರಿಸಲು, ''ತಿರುಕ್ಕುತುಂಬು ತೊರೆಯು'' ಬಳಿ ಆಳವಂದಾರವರ ದಿವ್ಯ ಶರೀರವನ್ನು ಇಟ್ಟುಕೊಂಡಿರಲು, ಕಂಚಿಯಿಂದ ಶ್ರೀರಾಮಾನುಜಾಚಾರ್ಯರನ್ನು ಕರೆದುಕೊಂಡು ಆ ಮಾರ್ಗವಾಗಿ ಬರುತ್ತಿದ್ದ ಪೆರಿಯನಂಬಿಗಳು ''ಇಲ್ಲಿ ಶ್ರೀವೈಷ್ಣವ ಗೋಷ್ಠಿಗೆ ಕಾರಣವೇನೆಂ'' ದು ವಿಚಾರಮಾಡಿ, ಸಂಗತಿಯನ್ನರಿತು ವ್ಯಸನ ಪರವಶರಾ

ದರು ಆಗ ಅಲ್ಲಿದ್ದ ಶ್ರೀವೈಷ್ಣವರು ಎಲ್ಲರನ್ನೂ ಸಮಾಧಾನಪಡಿಸಿ, ಶ್ರೀ ಆಳವಂದಾರರ ದಿವ್ಯ ಶರೀರದ ಮುಂದೆ ಶ್ರೀ ರಾಮಾನುಜಾಚಾರ್ಯ ರನ್ನು ಕರೆದುಕೊಂಡು ಹೋಗಿಬಿಟ್ಟರು ಆಚಾರ್ಯರು ಲೋಕಗುರುವಾದ ಆಳವಂದಾರರ ಚರಮ ವಿಗ್ರಹವನ್ನು ಆಪಾದ ಮಸ್ತಕವಾಗಿ ಸೇವಿಸುತ್ತಿರು ವಾಗ ಮೂರು ಬೆರಳುಗಳು ಮಡಿಸಿರುವದನ್ನು ನೋಡಿ, "ಯಾವಾಗಲೂ ಬೆರಳುಗಳು ಹೀಗೆಯೇ ಇದ್ದುವೋ" ಎಂದು ಕೇಳಲು, ಅಲ್ಲಿದ್ದವರು ಮೂರು ಬೆರಳುಗಳು ಮಡಿಸಿರುವುದಕ್ಕೆ ಶ್ರೀ ಆಳವಂದಾರರ ಶ್ರೇಷ್ಠಗ ಳಾದ ಮೂರು ಅಭಿಪ್ರಾಯಗೆಳನ್ನು ವಿಸ್ತಾರವಾಗಿ ಹೇಳಿದರು ರಾಮಾ ನುಜಾಚಾರ್ಯರು "ಆಳವಂದಾರರ ಕಟಾಕ್ಷಕ್ಕೆ ಪಾತ್ರನಾದ ನನ್ನ ಮೂಲಕ ಭಗವಂತನು ಈ ಕೆಲಸಗಳನ್ನು ನೆರವೇರಿಸುವನು" ಎಂದು ಹೇಳಿದ ಕ್ಷಣವೇ ಮಡಿಸಿದ ಬೆರಳುಗಳು ನೆಟ್ಟಗಾದವು ಅವರ ಮುಖವೂ ಪ್ರಸನ್ನವಾ ಯಿತು ಇದನ್ನು ನೋಡಿದ ತಿರುವರಂಗಪ್ಪೆರುಮಾಳರೆಯರೇ ಮುಂತಾದ ವರು ವಿಸ್ಮಿತರಾಗಿ ಮುಂದೆ ಇವರು ಆಚಾರ್ಯಸ್ಥಾನ ನಿರ್ವಾಹಕರಾಗುವ ರೆಂದು ಮನಸ್ಸಿನಲ್ಲಿ ಸಂತೋಷಪಟ್ಟು, ಆಳವಂದಾರರನ್ನು ಅಂತ್ಯ ಸಂಸ್ಕಾ ರದೊಡನೆ ಬೃಂದಾವನವಂ ಮಾಡಿದರು. ಅನಂತರ ರಾಮಾನುಜಾಚಾ ರ್ಯರು ಪೆರಿಯನಂಬಿಗಳ ಅಪ್ಪಣೆಯನ್ನು ಪಡೆದು ಚಿಂತಾಮಗ್ನರಾಗಿ ಕಂಚಿಗೆ ಬಂದರು

ಹೀಗಿರಲು, ಒಂದು ದಿನ ತಿರುಕ್ಕಚ್ಚಿನಂಬಿಗಳು (ಕಾಂಚೀಪೂರ್ಣರು) ಶ್ರೀ ವರದರಾಜನಿಗ ಅಂತರಂಗ ಶಿಷ್ಯರೆಂದು ಅರಿತು ತಮ್ಮ ಮನಸ್ಸಿನ ಲ್ಲಿದ್ದ ತಮ್ಮ ಜೀವಿತೋದ್ದೇಶವು ಮುಂದೆ ಯಾವ ರೀತಿಯಲ್ಲಿ ನಡೆಯ ಬೇಕೆಂಬುದನ್ನು ಶ್ರೀ ವರದರಾಜನಲ್ಲಿ ಬಿನ್ನವಿಸಬೇಕೆಂದು ಬೇಡಿಕೊಂ ಡರು ಅದೇ ರೀತಿಯಲ್ಲಿ ಕಾಂಚೀಪೂರ್ಣರು ಪರಮಾತ್ಮನಲ್ಲಿ ಬಿನ್ನವಿಸ ಲಾಗಿ, ಶ್ರಿಯಃಪತಿಯು "ನಾನೇ ಪರತತ್ತ್ವವು, ಭೇದವೇ ನನ್ನ ಮತವು. ಪ್ರಪತ್ತಿಯೇ ಸುಲಭವಾದ ಮೋಕ್ಷ ಸಾಧನವು. ಈಗ ಮಹಾಪೂರ್ಣರೇ ಪರಮಾಚಾರ್ಯರು" ಎಂಬುದಾಗಿ ಅನುಗ್ರಹಿಸಿದರು

ಮೇಲಣ ಭಗವದ್ವಾಕ್ಯಗಳಿಂದ ರಾಮಾನುಜರು ಮುಂದೆ ಮಾಡಬೇಕಾದ ಕರ್ತವ್ಯವು ಸೂಚಿತವಾದುದನ್ನು ತಿಳಿದು ಆನಂದ ಭರಿತರಾಗಿ ಮಹಾಪೂರ್ಣರಿಂದ ಉಪದೇಶವನ್ನು ಹೊಂದಿ ಶ್ರೀ ವಿಶಿಷ್ಟಾದ್ವೈತ ಮತವನ್ನು, ಪೂರ್ವಾಚಾರ್ಯರುಗಳ ನಿಬಂಧನೆಯಂತೆ, ಸ್ಥಾಪಿಸುವುದೇ ತಮ್ಮ ಜೀವಿತದಲ್ಲಿ ಪರಮ ಕರ್ತವ್ಯವೆಂದು ಸಂಕಲ್ಪಿಸಿದರು ನಂತರ ಪೆರಿಯ ನಂಬಿಗಳನ್ನಾಶ್ರಯಿಸಿ, ಅವರಿಂದ ಪಂಚಸಂಸ್ಕಾರವನ್ನು ಹೊಂದಿ, ಸರ್ವ ಮಂತ್ರಗಳ ವ್ಯಾಸಸೂತ್ರಾರ್ಥಗಳ ಮತ್ತು ತಿರುಮಾಲೆಯೇ ಮೊದಲಾದ ಮೂರು ಸಾವಿರ ದಿವ್ಯ ದ್ರವಿಡಪ್ರಬಂಧಗಳ (ತಿರುವಾಯ್‌ಮೊಳಿಯು) ಉಪದೇಶವನ್ನು ಹೊಂದಿದರು

ಹೀಗಿರಲಾಗಿ ರಾಮಾನುಜಾಚಾರ್ಯರು ತಮ್ಮ ಪತ್ನಿಯು ಭಾಗವತಾಪಚಾರ ರೂಪವಾದ ಮೂರು ತಪ್ಪುಗಳನ್ನು ಮಾಡಿದರೆಂಬ ನೆಪದಿಂದ ಆಕೆಯನ್ನು ಅವರ ತೌರುಮನೆಯಲ್ಲಿ ಬಿಟ್ಟು, ತಾವು ಸಂಸಾರ ಪಾಶದಿಂದ ಬಿಡುಗಡೆಯನ್ನು ಹೊಂದಿ, ಶ್ರೀ ವರದರಾಜನ ಅಪ್ಪಣೆಯಂತೆ ತುರ್ಯಾಶ್ರಮವನ್ನು ಸ್ವೀಕರಿಸಿ, ಯತಿರಾಜರೆಂಬ ನಾಮಧೇಯವನ್ನು ಪಡೆದರು. ಇವರಿಗೆ ಶ್ರೀವತ್ಸಚಿನ್ಹಮಿಶ್ರರೆಂಬ ಕೂರತ್ತಾಳ್ವಾರರು, ನಡದೂರಾಳ್ವಾರರು, ಮೊದಲಿಯಾಂಡಾನರು, ಗೋವಿಂದ ಭಟ್ಟರು, ದಾಶರಥಿ, ಶ್ರೀವತ್ಸಾಂಕರೇ ಮೊದಲಾದವರು ಶಿಷ್ಯರಾದರು ಯಾದವ ಪ್ರಕಾಶರು ತಮ್ಮ ತಾಯಿ ಮತ್ತು ಶ್ರೀ ದೇವರಾಜನ ಅಪ್ಪಣೆಯಂತೆ ಸಂಪೂರ್ಣ ನಂಬಿಕೆಯಿಂದ ಶ್ರೀ ರಾಮಾನುಜಾಚಾರ್ಯರಿಗೆ ಶಿಷ್ಯರಾಗಿ, ತ್ರಿದಂಡವನ್ನು ಧರಿಸಿ, ಗೋವಿಂದಜೀಯರೆಂಬ ಹೆಸರಿನಿಂದ, ಯತಿಧರ್ಮ ಸಮುಚ್ಚಯವೆಂಬ ಗ್ರಂಥವನ್ನು ಮಾಡಿ, ಶ್ರೀ ರಾಮಾನುಜಾಚಾರ್ಯರಲ್ಲಿ ಭಕ್ತಿಯುತರಾಗಿದ್ದು, ಮೋಕ್ಷವಂ ಪಡೆದರು. ಇದೇ ರೀತಿಯಲ್ಲಿ ಗೋವಿಂದಭಟ್ಟರೂ ಮತ್ತು ಇತರ ಅದ್ವೈತಿಗಳೂ "ವಿಷ್ಣುವೇ ಸರ್ವೋತ್ತಮನು ಮತ್ತು ಮೋಕ್ಷಪ್ರದನೆಂದು ಅನೇಕ ದೃಷ್ಟಾಂತಗಳಿಂದ ನಂಬಿದವರಾಗಿ" ಶ್ರೀಯುವರ ಪಾದಾಶ್ರಯವನ್ನು ಹೊಂದಿದರು

ಈ ಸಂಗತಿಗಳೆಲ್ಲವನ್ನೂ ಶ್ರೀರಂಗದಲ್ಲಿದ್ದ ಆಳವಂದಾರರ ಶಿಷ್ಯರು ಕೇಳಿ, ಆಶ್ಚರ್ಯಯುತರಾಗಿ ಯತಿರಾಜರನ್ನು ಅಲ್ಲಿಗೆ ಕರದುಕೊಂಡು ಬರಲು, ಶ್ರೀ ಯಾಮುನಾಚಾರ್ಯರವರ ಪೂರ್ವಾಶ್ರಮದ ಕುಮಾರರಾದ ವರರಂಗನಾಯಕರ್ (ತಿರುವರಂಗಪ್ಪೆರುಮಾಳ್) ರವರನ್ನು ಪ್ರಾರ್ಥಿಸಲು, ಅವರು ಕಂಚಿಗೆ ಬಂದು ಶ್ರೀ ವರದರಾಜನ ಅಪ್ಪಣೆಯಂ ಪಡೆದು ಶ್ರೀ ರಾಮಾನುಜಾಚಾರ್ಯರನ್ನು ಶ್ರೀರಂಗಕ್ಕೆ ಕರದುಕೊಂಡು ಬಂದರು. ಶ್ರೀವೈಷ್ಣವ ಶಿಷ್ಯರು ಶ್ರೀ ಆಚಾರ್ಯರನ್ನು ತಿರುವಾಲೆ, ಪರಿವಟ್ಟವೇ ಮೊದಲಾದ ಮರ್ಯಾದೆಗಳೊಡನೆ ಇದಿರ್ಗೊಂಡು, ಭಗವತ್ಪ್ರಸಾದಗಳನ್ನು ಅರ್ಪಿಸಿ, ಶ್ರೀರಂಗೇಶನ ಸನ್ನಿಧಿಗೆ ಕರೆತಂದರು ಶ್ರೀ ರಾಮಾನುಜಾಚಾರ್ಯರು ಪ್ರಸಾದವನ್ನು ಶಿರಸಾವಹಿಸಿ, ಶ್ರೀರಂಗನಾಯಕಿಯನ್ನೂ, ಶ್ರೀರಂಗೇಶನನ್ನೂ ಭಕ್ತಿಯುತರಾಗಿ ಸೇವಿಸಿದರು. ಆಗ ಅರ್ಚಕರ ಮುಖದಿಂದ, ತನ್ನ ಸೇವೆಯಂ ಮಾಡಿಕೊಂಡಿರುವಂತೆ ಶ್ರೀ ಭಗವಂತನಿಂದ ಆಜ್ಞಪ್ತರಾಗಿ, ಪೆರಿಯವಾದ ಮಹಿಮೆಯಿಂದ, ಈ ಉಭಯ ವಿಭೂತಿ ತಮಗುಂಟಾಯಿತೆಂದು ಸಂತುಷ್ಟರಾಗಿ, ಕೆಲಸಕಾರ್ಯಗಳನ್ನು ಬಹು ಭಕ್ತಿ ಶ್ರದ್ಧೆಗಳಿಂದಲೂ, ವಿತರಣೆಯಿಂದಲೂ, ನಿರ್ವಹಿಸುತ್ತಲಿದ್ದರು.

ಶ್ರೀಮದಾಚಾರ್ಯರು ಶ್ರೀರಂಗದಲ್ಲಿದ್ದುಕೊಂಡು, ಪರಮವೇದಾಂತಿಗಳಾದ ಮಹಾಪೂರ್ಣರಿಂದ ತಿರುಮಂತ್ರಾರ್ಥವನ್ನೂ, ಗೋಷ್ಠೀಪೂರ್ಣ (ತಿರುಕ್ಕೋಟ್ಟಿಯಾರ್ನಂಬಿ) ರಿಂದ ದ್ವಯಮಂತ್ರಾರ್ಥ ರಹಸ್ಯವನ್ನೂ, ಚರಮಶ್ಲೋಕದ ಗೂಢಾರ್ಥಗಳನ್ನೂ, ಉಪದೇಶಹೊಂದಿದರು ಹಾಗೆಯೇ ವರರಂಗನಾಯಕರಲ್ಲಿ ತಿರುವಾಯಿಮೊಳಿ ಮೊದಲಾದ ದಿವ್ಯ ಪ್ರಬಂಧಗಳಲ್ಲಿರುವ ರಹಸ್ಯಾರ್ಥಗಳನ್ನೂ ಕಲಿತು, ತಿರುಪತಿಯಲ್ಲಿ ಶ್ರೀ ಶೈಲಪೂರ್ಣರ ಬಳಿ ಒಂದು ವರುಷಕಾಲ ರಾಮಾಯಣ ಕಾಲಕ್ಷೇಪವನ್ನು ಮಾಡಿದರು

ಈ ರೀತಿಯಾಗಿ ವಿದ್ಯಾವ್ಯಾಸಂಗವು ಮುಗಿದ ನಂತರ ಆಚಾರ್ಯರವರು, ಯಜ್ಞಮೂರ್ತಿ ಎಂಬ ಅದ್ವೈತ ಪಂಡಿತರನ್ನು ವಾದದಲ್ಲಿ

ಜಯಿಸಿ, ಶಿಷ್ಯನನ್ನಾಗಿ ಮಾಡಿಕೊಂಡು, ಇವರಿಗೆ ದೇವರಾಜಮುನಿ (ಅರುಳಾಳಪ್ಪೆರುಮಾಳ್) ಎಂಬ ಅಂಕಿತವಂ ಕೊಟ್ಟು, ಮಧುರ, ತಿರುಪತಿ, ದತ್ತಾತ್ರೇಯಕ್ಷೇತ್ರ, ದ್ವಾರಕ ಪ್ರಯಾಗ, ಕಾಶಿ, ಹರಿದ್ವಾರ, ಬದರಿಕಾಶ್ರಮವೇ ಮುಂತಾದ ಪುಣ್ಯಸ್ಥಳಗಳ ಯಾತ್ರೆಯಂ ಮಾಡಿ, ಶ್ರೀನಗರಕ್ಕೆ ದಯಮಾಡಿದರು ಅಲ್ಲಿಯ ವಿದ್ವನ್ಮಂಡಲಿಯಲ್ಲಿ ತಾವು ಬೋಧಾಯನ ವೃತ್ತಿಯನ್ನು ಇಟ್ಟುಕೊಂಡ ಟಂಕಗುಹದೇವ ದ್ರಮಿಡಾಚಾರ್ಯರುಗಳ ಉಕ್ತಿಯನ್ನನುಸರಿಸಿ ರಚಿಸಿದ ಶ್ರೀ ಭಾಷ್ಯವನ್ನು ಓದಿ ಸಾಕ್ಷಾತ್ಸರಸ್ವತೀ ದೇವಿಯಿಂದ ಪ್ರಸಾದಿತರಾದರು ಸರಸ್ವತಿಯು ಅವರಿಗೆ "ಭಾಷ್ಯಕಾರರ್" ಎಂಬ ಬಿರುದನ್ನೂ, ಅವರ ಭಾಷ್ಯಕ್ಕೆ "ಶ್ರೀಭಾಷ್ಯ"ವೆಂಬ ಹೆಸರನ್ನು ಕೊಟ್ಟು, ಅವರಿಗೆ ಶ್ರೀ ಹಯಗ್ರೀವ ಮೂರ್ತಿಯನ್ನು ಬಹುಮಾನಿಸಿದಳೆಂದು ಇತಿಹಾಸವುಂಟು ಇದೇ ರೀತಿಯಲ್ಲಿ ಇನ್ನೂ ಅನೇಕ ದಿವ್ಯದೇಶಗಳನ್ನೂ, ಕ್ಷೇತ್ರಗಳನ್ನೂ ನೋಡಿಕೊಂಡು, ದಿಗ್ವಿಜಯದಿಂದ ಶ್ರೀರಂಗಕ್ಕೆ ಹಿಂತಿರುಗಿದರು.

ನಂತರ ಶ್ರೀ ಸ್ವಾಮಿವರ್ಯರು, ತಮ್ಮ ಪೂರ್ವಾಚಾರ್ಯರುಗಳು ಪರಮಪವಿತ್ರವಾದ ಈ ಭರತಖಂಡದಲ್ಲಿ ಧರ್ಮಸಂಸ್ಥಾಪನೆಯನ್ನು ಮಾಡಲು ಪ್ರಯತ್ನಿಸಿ, ಆಗಾಗ ಸನಾತನಧರ್ಮವು ಪ್ರಜ್ವಲಿಸುವಂತೆ ಮಾಡಲು, ತಮ್ಮ ಶಿಷ್ಯವರ್ಗಕ್ಕೆ ವೇದ, ವೇದಾಂತಗಳನ್ನು ಉಪದೇಶಿಸಿ ಪ್ರಖ್ಯಾತಿಹೊಂದಿದ್ದ ಸನಕ, ಸನಾದಿಗಳು, ನಾರದ, ವಾಲ್ಮೀಕಿ, ವ್ಯಾಸ, ಶುಕ ಮುಂತಾದವರೂ ಮತ್ತು ೩೦೦೦ ವರುಷಗಳ ಹಿಂದೆಯೇ ಪೊಯ್ಗೈಯಾಳ್ವಾರ್, ಪೇಯಾಳ್ವಾರ್, ಮಧುರಕವಿಯಾಳ್ವಾರ್, ಪೆರಿಯಾಳ್ವಾರ್, ಕುಲಶೇಖರಾಳ್ವಾರ್, ನಾಥಮುನಿ, ಮಣಕ್ಕಾಲ್‌ನಂಬಿ, ಯಾಮುನಾಚಾರ್ಯರೇ ಮುಂತಾದವರು ಮಾಡಿದ್ದ ತತ್ತ್ವೋಪದೇಶವನ್ನೇ ಭಿತ್ತಿಯಾಗಿಟ್ಟುಕೊಂಡು, ತಮ್ಮ ಶಿಷ್ಯರೊಡನೆ ಗ್ರಂಥರಚನೆಯನ್ನು ಮಾಡಲುಪಕ್ರಮಿಸಿದರು.

ತರುವಾಯ ಶ್ರೀ ಭಾಷ್ಯಕಾರರು ಗದ್ಯತ್ರಯವನ್ನೂ, ಬಾದರಾಯಣರ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನೂ, ವೇದಾಂತದೀಪ, ವೇದಾಂತ

ಸಾರ, ವೇದಾರ್ಥಸಂಗ್ರಹ, ಗೀತಾಭಾಷ್ಯ, ವಿಷ್ಣುಸಹಸ್ರನಾಮಭಾಷ್ಯ, ತಿರುವಾಯಿಮೊಳಿ ಎಂಬ ಪ್ರಬಂಧಕ್ಕೆ ಆರು ಸಾವಿರ ಭಾಷ್ಯವನ್ನು ರಚಿಸಿ ಆಳವಂದಾರ್, ನಮ್ಮಾಳ್ವಾರ್, ರವರ ಕೀರ್ತಿಯು ಚಿರಸ್ಥಾಯಿಯಾಗಿ ಆಸೇತು ಹಿಮಾಲಯ ಪರ್ಯಂತರವೂ ನೆಲೆಸುವಂತೆ, ಶ್ರೀ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸ್ಥಿರೀಕರಿಸಿದರು

ದೇವಾಂಶ ಸಂಭೂತರಾದ ಶ್ರೀ ಭಾಷ್ಯಕಾರರ ಹೆಸರು ಈರೀತಿಯಾಗಿ ಲೋಕವಿಖ್ಯಾತವಾಗಲು, ಶೈವಮತಾವಲಂಬಿಯಾದ ಕುಲೋತ್ತುಂಗ (ಕ್ರಿಮಿಕಂಠ) ಚೋಳರಾಜನು ತನ್ನ ಪ್ರಜೆಗಳೆಲ್ಲರೂ "ಶಿವಾತ್ ಪರತರಂ ನಾಸ್ತಿ" ಎಂಬ ಮತವನ್ನು ಅಂಗೀಕರಿಸಬೇಕೆಂದು ಬಲಾತ್ಕರಿಸಲಾರಂಭಿಸಿ, ಶ್ರೀ ವೈಷ್ಣವ ಮತಾಗ್ರಗಣ್ಯರಾದ ಶ್ರೀ ರಾಮಾನುಜಾಚಾರ್ಯರು ಈ ಮತಕ್ಕೆ ತಮ್ಮ ಸಮ್ಮತಿಯನ್ನು ಕೊಡಬೇಕೆಂದು ಅವರನ್ನು ಕರೆಯಕಳುಹಿಸಿದನು ಯತಿವರ್ಯರು ಸಾಕ್ಷಾತ್ತಾಗಿ ಹೋಗುವುದರಿಂದ, ಪ್ರಾಣಾಪಾಯ ಸಂಭವಿಸಬಹುದೆಂದು ಶಿಷ್ಯರು ಭೀತರಾಗಿ, ಶ್ರೀಮದಾಚಾರ್ಯರನ್ನು ಹೊಯಿಸಳದೇಶಕ್ಕೆ ಕಳುಹಿಸಿ, ಕೂರನಾಥರು ಮತ್ತು ಮಹಾಪೂರ್ಣರು ಸನ್ಯಾಸಿ ವೇಷವನ್ನು ಧರಿಸಿ, ರಾಜಾಸ್ಥಾನಕ್ಕೆ ತೆರಳಿದರು ಇವರು ಶೈವಮತವನ್ನು ಅಂಗೀಕರಿಸದೆ ಅದಕ್ಕೆ ಪ್ರತಿಯಾಗಿ "ದ್ರೋಣಮಸ್ತಿ ತತಃಪರಂ" ಎಂದು ಹೇಳಲು, ರಾಜನು ಕೋಪದಿಂದ, ಪರಮಭಾಗವತೋತ್ತಮರಾದ ಅವರ ಕಣ್ಣುಗಳನ್ನು ಕೀಳಿಸಿ ಹಿಂತಿರುಗುವಂತೆ ಅಪ್ಪಣೆಯಂ ಮಾಡಿದನು ವೃದ್ಧರಾದ ಮಹಾಪೂರ್ಣರು ಬಾಧೆಯನ್ನು ಸಹಿಸಲಾರದೆ ಮಾರ್ಗಮಧ್ಯದಲ್ಲಿಯೇ ಪರಂಧಾಮವನ್ನೈದಿದರು ಕೂರನಾಥರು ಬಹು ಕಷ್ಟದಿಂದ ಶ್ರೀರಂಗವಂ ಸೇರಿದರು

ಇತ್ತಲಾಗಿ ಶ್ರೀ ರಾಮಾನುಜಾಚಾರ್ಯರವರೂ, ಅವರ ಶಿಷ್ಯರೂ ಕಾವೇರೀ ನದೀ ತೀರವಾಗಿ ಹೊರಟು ಸಾಲಗ್ರಾಮವನ್ನು ಸೇರಿ ಅಲ್ಲಿ ಶ್ರೀ ನೃಸಿಹ್ಮಸ್ವಾಮಿಯ ಸನ್ನಿಧಿಯಲ್ಲಿ ಸುಮಾರು ಹನ್ನೆರಡು ವರ್ಷಗಳ ಕಾಲ ವಾಸವಾಗಿದ್ದರು ಹೊಯಿಸಳ ರಾಜನಾದ ಬಿಟ್ಟಿದೇವರಾಯನು

(ವಿರಲದೇವರಾಯ) ತೊಂಡನೂರುನಂಬಿಯ ಮೂಲಕ ಆಚಾರ್ಯವರ್ಯರಿಂದ ತನ್ನ ಕುಮಾರಿಗೆ ಹಿಡಿದಿದ್ದ ಭೂತವನ್ನು ಓಡಿಸಿ, ರಾಜಕುಮಾರಿಗೆ ಆರೋಗ್ಯವನ್ನುಂಟುಮಾಡಿಸಿದನು ಇದೂ ಅಲ್ಲದೆ ಇನ್ನೂ ಅನ್ಯಾದೃಶವಾದ ಕೆಲಸಗಳು ಶ್ರೀಯವರ ಪ್ರಭಾವದಿಂದ ನಡೆಯುತ್ತಾ ಬಂದವು ವಿರಲದೇವನು ಇವರ ಪ್ರಭಾವವನ್ನು ನೋಡಿ, ವಿಸ್ಮಿತನಾಗಿ "ವಿಷ್ಣುವರ್ಧನರಾಯನೆಂಬ" ಹೆಸರಿನಿಂದ ಜೈನಮತವನ್ನು ತೊರೆದು, ಶ್ರೀವೈಷ್ಣವ ದೀಕ್ಷೆಯನ್ನು ತೆಗೆದುಕೊಂಡು, ಅವರ ಶಿಷ್ಯನಾದನು ಇದೇ ರೀತಿಯಲ್ಲಿ ಅನೇಕರು, ಇವರ ಪಾದಾರವಿಂದವನ್ನಾಶ್ರಯಿಸಿ, ಶಿಷ್ಯರಾದರು ಅನಂತರ ಯತಿರಾಜರು ತೊಂಡನೂರು ನಂಬಿಗೆ, ವೇದಾಂತ ಪ್ರವಚನವಂಗೈಯ್ಯುವಕಾಲದಲ್ಲಿ, ಶ್ರೀರಂಗದಿಂದ ತಂದಿದ್ದ ಶ್ವೇತಮೃತ್ತಿಕೆಯು ಮುಗಿದುಹೋಯಿತೆಂದು ಹೇಳಲು ಶ್ರೀಮದಾಚಾರ್ಯರಿಗೆ ಯೋಚನೆಯು ಹುಟ್ಟಿತು ಏಕಂದರ, ತಿರುನಾಮವನ್ನು ಧರಿಸದೆ, ಶೂನ್ಯಲಲಾಟದಲ್ಲಿ ಯಾವ ಶ್ರೀವೈಷ್ಣವನೂ ನಿತ್ಯಕರ್ಮಗಳನ್ನು ನಡೆಸಕೂಡದು ಈಗ ಏನುಮಾಡಬೇಕೆಂದು ಮೂರು ದಿವಸ ನಿರಾಹಾರವಾಗಿ ಯೋಚಿಸುತ್ತಿರುವಲ್ಲಿ, ಯತೀಂದ್ರರ ಸ್ವಪ್ನದಲ್ಲಿ ಪ್ರಣತಾರ್ತಿಹರನಾದ ಯಾದವಾಚಲ ನಿಲಯನಾದ ಶ್ರೀಮನ್ನಾರಾಯಣನು ಪ್ರಸನ್ನನಾಗಿ, ಯತೀಂದ್ರರನ್ನು ಕುರಿತು "ಯಾದವಾದ್ರಿಯಲ್ಲಿ ನಾನಿರುವೆನು ಅಲ್ಲಿ ಕಲ್ಯಾಣಿಯೂ, ಅಷ್ಟತೀರ್ಥಗಳೂ, ಪಂಚಭಾಗವತಕ್ಷೇತ್ರಗಳೂ ಇರುತ್ತವೆ ಆ ಬಳಿ ಗರುತ್ಮಂತನು ತಂದಿಟ್ಟಿರುವ ಶ್ವೇತಮೃತ್ತಿಕೆಯು ಇದೆ, ನೀನು ಬಂದು ನನ್ನನ್ನು ಸೇವಿಸಿ, ಮೃತ್ತಿಕೆಯನ್ನು ಪಡೆದು, ನನ್ನ ದೇವಾಲಯವನ್ನು ಕಟ್ಟಿಸಿ, ತಿರುನಾರಾಯಣಪುರವೆಂಬ ಗ್ರಾಮವನ್ನು ಕಲ್ಪಿಸಿ, ನನಗೆ ಆರಾಧನ ಕ್ರಮವನ್ನು ನಡೆಸುತ್ತ ಸೇವಿಸುತ್ತಲಿರು" ಎಂದು ಅಪ್ಪಣೆಯಂ ಮಾಡಿದನು ಈ ವೃತ್ತಾಂತವನ್ನು ತನ್ನ ಶಿಷ್ಯರಿಗೂ, ವಿಷ್ಣುವರ್ಧನರಾಯನಿಗೂ ಅರುಹಿ, ಯಾದವಾದ್ರಿಯನ್ನು ಕುರಿತು ಪ್ರಯಾಣಮಾಡಿ, ರಾಜವಾಲ್ಲಭ್ಯದಿಂದ, ಅಲ್ಲಿಯ ಕಾಡುಗಳನ್ನು ಭೇದಿಸಿ, ದಾರಿಯನ್ನು ಸುಪಥವನ್ನಾಗಿ ಮಾಡಿಸಿ ಯಾದವಾಚಲವನ್ನು ಹತ್ತಿ, ಅಲ್ಲಿಯ ಪರಿದಾನ

ಶಿಲೆಗೆ ಪ್ರಣಮಿಸಿ, ವೇದಪುಷ್ಕರಣಿಯಲ್ಲಿ ಮಿಂದು, ಕಾಷಾಯವಂ ಧರಿಸಿ, ಆ ಗಿರಿಯ ಎಲ್ಲಾ ಕಡೆಯಲ್ಲಿಯೂ ನೋಡುತ್ತಿರಲು, ಜೀರ್ಣವಾದ ಆನಂದಮಯ ದಿವ್ಯ ವಿಮಾನ ಪ್ರಾಕಾರಗೋಪುರವಂ ಕಂಡು, ಶ್ರಿಯಃ ಪತಿಯನ್ನು ಕಾಣದೆ ವ್ಯಾಕುಲಚಿತ್ತರಾಗಿರಲು, ದೇವೇಶನು ತುಳಸೀ ವೃಕ್ಷದ ಕೆಳಗಿರುವ ಹುತ್ತದಲ್ಲಿರುವಂತೆಯೂ, ಕಲ್ಯಾಣಿಸರಸ್ಸಿನ ಪಶ್ಚಿಮಭಾಗದಲ್ಲಿ ಶ್ವೇತಮೃತ್ತಿಕೆಯು ಇರುವಂತಯೂ ಆಕಾಶವಾಣಿಯಾಯಿತು ಈ ರೀತಿಯಾಗಿ ಭಗವದ್ವಾಕ್ಯವಂ ಕೇಳಿ ಯತೀಂದ್ರರು ಸಂತುಷ್ಟರಾಗಿ, ವಿಷ್ಣುವರ್ಧನರಾಯನಿಗೆ ತಿಳಿಸಿ, ಸ್ನಾತರಾಗಿ, ಶ್ವೇತಮೃತ್ತಿಕಾಸ್ಥಳವಂ ಕಂಡು, ಅದರಿಂದ ಊರ್ಧ್ವಪುಂಡ್ರಗಳನ್ನು ಧರಿಸಿ, ನಿತ್ಯಕರ್ಮವನ್ನು ಮಾಡಿ, ನಿರ್ಮಲಚಿತ್ತರಾಗಿ, ರಾಜನೊಡನೆ ತುಳಸೀಗಿಡದ ಬಳಿ ಇರುವ ವಲ್ಮೀಕವನ್ನು ಭೇದಿಸಿ ನೋಡಲಾಗಿ ಅದರಲ್ಲಿ ಅವತರಿಸಿದ್ದ ಅವಾಙ್ಮನಗೋಚರನಾದ ಕಾಂತಿನಿಧಿಯನ್ನು, ೧೦೨೦ ನೇ ಬಹುಧಾನ್ಯ (ಕ್ರಿ॥ಶ॥ ೧೦೯೮) ಸಂವತ್ಸರದ ಪುಷ್ಯ ಶುದ್ಧ ಚತುರ್ದಶಿ ಗುರುವಾರ ಪುನರ್ವಸು ನಕ್ಷತ್ರದಲ್ಲಿ, ಕಂಡು, ಶ್ರೀಮದಷ್ಟಾಕ್ಷರ ವಾಚ್ಯನಾದ ತಿರುನಾರಾಯಣನ ದರ್ಶನವಂ ಮಾಡಿ, ತಾವೇ ಕ್ಷೀರಾಭಿಷೇಕವಂಗೈದು, ಮರುದಿವಸ ಭಕ್ತಿಯಿಂದ ಪೂಜಿಸಿ, ಕೃತಕೃತ್ಯರಾದರು ತರುವಾಯ ವಿಷ್ಣುವರ್ಧನರಾಯನ ಸಹಾಯದಿಂದ ಸ್ವಾಮಿಯ ಗೋಪುರವನ್ನೂ, ದೇವಾಲಯವನ್ನೂ, ಅನೇಕ ಬೀದಿಗಳನ್ನೂ, ಮಂಟಪ ಮತ್ತು ಕೈಸಾಲೆಗಳನ್ನೂ ಕಟ್ಟಿಸಿದರು ರಾಜನು ಯತಿವರ್ಯರಿಗೆ ಒಂದು ಮಠವನ್ನು ಕಟ್ಟಿಸಿ ಕೊಟ್ಟನು ಶ್ರೀ ರಾಮಾನುಜಾಚಾರ್ಯರು ಪಾಂಚರಾತ್ರಾಗಮಪ್ರಕಾರ ಶ್ರೀರಂಗರಾಜ ಭಟ್ಟರಿಂದ ಸುಮುಹೂರ್ತದಲ್ಲಿ ಯದುಗಿರೀಶನಿಗೆ ಸಂಪ್ರೋಕ್ಷಣಾದಿ ಕಾರ್ಯಗಳನ್ನು ಮಾಡಿಸಿದರು

ಹೀಗಿರಲು ಅರ್ಚಾವಿಗ್ರಹನಾದ ಶ್ರೀಮನ್ನಾರಾಯಣನಿಗೆ ಉತ್ಸವ ವಿಗ್ರಹವು ಇಲ್ಲವೆಂದು ಯೋಚಿಸುತ್ತಲಿರಲು, ತಮ್ಮ ಸ್ವಪ್ನದಲ್ಲಿ ಶ್ರೀರಾಮಪ್ರಿಯ (ಸಂಪತ್ಕುಮಾರ) ನೆಂಬ ಮೂರ್ತಿಯು, ದೇಹಲಿಯ ರಾಜಕುವರಿಯ ಅಂತಃಪುರದಲ್ಲಿ ಇರುವುದನ್ನು ಕಂಡು, ದೇಹಲಿಗೆ

ಹೋಗಿ ತುರುಷ್ಕರಾಜನ ಅಪ್ಪಣೆಯಂ ಪಡೆದು, ಶ್ರೀರಾಮಪ್ರಿಯನನ್ನು (ಶಲ್ವಪಿಳ್ಳೈ) ಯಾದವಾದ್ರಿಗೆ ಬಿಜಮಾಡಿಸಿಕೊಂಡು ಬಂದು, ಶ್ರೀ ತಿರುನಾರಾಯಣನ ಸನ್ನಿಧಿಯಲ್ಲಿ ಶ್ರೀ ಸಂಪತ್ಕುಮಾರನಿಗೆ ಸುಮುಹೂರ್ತದಲ್ಲಿ ಸಂಪ್ರೋಕ್ಷಣವಂ ಮಾಡಿಸಿ, ಪ್ರತಿಷ್ಠೆಮಾಡಿ, ಭಗವಂತನಿಗೆ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಮತ್ತು ಸಂವತ್ಸರೋತ್ಸವಗಳು ಯಥಾವಿಧಿಯಾಗಿ ಆಚಾರ್ಯಪುರುಷರ ಮುಖಾಂತರವಾಗಿ ನಡೆಯಲು ಏರ್ಪಾಡುಮಾಡಿದರು ಯತೀಂದ್ರರು (ಎಂಬೆರುಮಾನಾರ್), ಶ್ರೀರಾಮಪ್ರಿಯನನ್ನು ದೇಹಲಿಯಿಂದ ಬಹಳ ವಿಜೃಂಭಣೆಯಿಂದ ಬಿಜಮಾಡಿಸಿಕೊಂಡು ಬರುವಾಗಲೂ, ದೇವಾಲಯವನ್ನು ಕಟ್ಟುವಾಗಲೂ, ಪಂಚಮರು (ತಿರುಕ್ಕುಲದಾಸರು) ಅವರಿಗೆ ಸಹಾಯಮಾಡಿದುದರಿಂದ ಬ್ರಹ್ಮೋತ್ಸವ ಕಾಲದಲ್ಲಿ ಮೂರು ದಿನಗಳು ಮಾತ್ರ ದೇವಾಲಯದೊಳಗಿನ ಬಲಿಪೀಠದವರಿಗೆ ಬಂದು, ಶ್ರೀಶನ ಸೇವೆಯನ್ನು ಮಾಡಲು ಅಭಯಪ್ರದಾನವನ್ನು ಮಾಡಿದರು ಶ್ರೀಶಲ್ವಪಿಳ್ಳೈಯವರಲ್ಲಿ ಐಕ್ಯಹೊಂದಿದ ಪರಮ ಭಕ್ತಳಾದ ಡಿಳ್ಳೀಶನ ಕುಮಾರಿಯ (ವರನಂದಿ) ಅರ್ಚಾವಿಗ್ರಹವನ್ನು ಮಾಡಿಸಿ, ಸ್ವಾಮಿಯ ದಿವ್ಯ ಪಾದಪದ್ಮಂಗಳಲ್ಲಿ ವಿಧ್ಯುಕ್ತವಾಗಿ ಸ್ಥಾಪಿಸಿದರು ಡಿಳ್ಳೀಶನು ತನ್ನ ಮಗನ ಮುಖಾಂತರವಾಗಿ ಯಾದವಗಿರಿಯಲ್ಲಿ ನಡೆದ ಅದ್ಭುತಕಾರ್ಯವನ್ನು ತಿಳಿದು, ಅಳಿಯನಾದ ಶ್ರೀಶಲ್ವರಾಯನಿಗೆ, ಅನೇಕ ತಿರುವಾಭರಣಗಳನ್ನೂ, ವಸ್ತ್ರಗಳನ್ನೂ, ಗ್ರಾಮಗಳನ್ನೂ, ಸಮರ್ಪಿಸಿದನೆಂದು ತಿಳಿಯಬರುವುದು

ಈ ರೀತಿಯಾಗಿ ಇತ್ತಕಡೆ ತಿರುನಾರಾಯಣಪುರದಲ್ಲಿ (ಮೇಲುಕೋಟೆ) ವಿಷ್ಣುಭಕ್ತಾಗ್ರಯಾಯಿಗಳಾದ ಶ್ರೀ ಭಾಷ್ಯಕಾರರು ತಮ ಶಿಷ್ಯರೊಡನೆ, ಶ್ರೀಮನ್ನಾರಾಯಣನ ಸನ್ನಿಧಿಯಲ್ಲಿ, ವೇದಪಾರಾಯಣ, ನಾಲಾಯಿರ ದಿವ್ಯ ಪ್ರಬಂಧ, ರಾಮಾಯಣ, ವಿಷ್ಣುಪುರಾಣ ಮೊದಲಾದ ಸದ್ಗ್ರಂಥಗಳನ್ನು ಪಾರಾಯಣ ಮಾಡಿಸಿ, ತದಿಯಾರಾಧನವೆಂಬ ಕೈಂಕರ್ಯವನ್ನು, ಹನ್ನೆರಡು ವರುಷಗಳ ಕಾಲ ಜರುಗಿಸುತ್ತಿರಲು, ಅತ್ತಲಾಗಿ ಚೋಳರಾಜನು ಗಂಡಾಮಾಲೆ ಎಂಬ ರೋಗದಿಂದ ಮೃತನಾದನೆಂದು

ಶ್ರೀರಂಗದಿಂದ ಬಂದ ಶಿಷ್ಯರಮುಖೇನ ತಿಳಿದು, ಪುನಃ ಶ್ರೀರಂಗಕ್ಕೆ ಹಿಂತಿರುಗಲು ಉದ್ಯುಕ್ತರಾಗಿ, ಕೂರತ್ತಾಳ್ವಾರರ ಸಮಾಧಾನಾರ್ಥವಾಗಿ ಶ್ರೀರಂಗಕ್ಕೆ ಶಿರಿಯಾಂಡಾರ್ ಎಂಬುವರನ್ನು ಕಳುಹಿಸಿದರು ಈ ಸಮಾಚಾರವನ್ನು ತಿರುನಾರಾಯಣಪುರದಲ್ಲಿಯ ಶಿಷ್ಯರು ಕೇಳಿ, ಅತ್ಯಂತ ವ್ಯಾಕುಲವುಳ್ಳವರಾಗಿಲು, ಶ್ರೀ ರಾಮಾನುಜಾಚಾರ್ಯರು ಅವರಿಗೆ ಕಾಲೋಚಿತವಾದ ಧೈರ್ಯವನ್ನು ಹೇಳಿ, ಸಮಾಧಾನಪಡಿಸಿ, ಅವರ ಸೇವೆಗಾಗಿ ಲಕ್ಷ್ಮಣಾರ್ಯರೆಂಬ ನಾಮಧೇಯದಿಂದ ಶೋಭಿಸುವ ವಿಗ್ರಹವೊಂದನ್ನು ಮಾಡಿಸಿ, ಆ ವಿಗ್ರಹದಲ್ಲಿ ಆತ್ಮಾಂಶವನ್ನಾವಾಹಿಸಿ, ಆಲಂಗಿಸಿ, ತಿರುನಾರಾಯಣನ ಸನ್ನಿಧಿಯಲ್ಲಿ ಸ್ಥಾಪನೆಯಂ ಮಾಡಿ, ಶ್ರೀರಂಗವನ್ನು ಕುರಿತು ಬೇಲೂರು (ವೇಲಾಪುರಿ) ಮಾರ್ಗವಾಗಿ, ಪ್ರಯಾಣ ಬೆಳಸಿದರು

ಶ್ರೀರಂಗವನ್ನು ನೇರಿದ ಕೂಡಲೆ ನಿರ್ಹೇತುಕ ವಾತ್ಸಲ್ಯವುಳ್ಳ ಶ್ರೀ ಭಾಷ್ಯಕಾರರು ಕೂರನಾಥರನ್ನು ಸೇವಿಸಿ, ಅವರಲ್ಲಿ ಕನಿಕರಗೊಂಡು ಉಪಚರಿಸಿದರು ಪರಮಭಾಗವತೋತ್ತಮರಾದ ಕೂರೇಶರು ಶ್ರೀ ವರದರಾಜಸ್ತವವೆಂಬುದನ್ನು ರಚಿಸಿ, ಶ್ರೀ ಯತಿರಾಜರ ಎದುರಿನಲ್ಲಿ ಶ್ರೀ ವರದನನ್ನು ಪ್ರಾರ್ಥಿಸಲಾಗಿ, ಶ್ರಿಯಃಪತಿಯು ಇವರಿಗೆ ಪ್ರಾಕೃತ ಮಾದ ದಿವ್ಯ ಚಕ್ಷುಸ್ಸನ್ನು ಅನುಗ್ರಹಿಸಿದನು ತರುವಾಯ ಅಲ್ಲಿಯ ಶಿಷ್ಯರಿಂದ ಪ್ರಾರ್ಥಿತರಾಗಿ ಶ್ರೀಮದಾಚಾರ್ಯರವರು ಪುನಃ ಧರ್ಮಸಂಸ್ಥಾಪನೆಂಬ ಸನ್ಮಾರ್ಗದಲ್ಲಿ ನಿರತರಾಗಿ, ಶ್ರೀ ಮಠಾಧಿಕಾರವನ್ನು ವಹಿಸಿದರು ಈ ಮಹನೀಯರು ತಮ್ಮ ಜೀವಿತೋದ್ದೇಶವನ್ನು ನೆರವೇರಿಸಿ, ತಮ್ಮ ಉಪದೇಶಗಳು ಸುಸ್ಥಿರವಾಗಿ ಮುಂದರಿಯಲು, ಪೂರ್ವಾಶ್ರಮದಲ್ಲಿ ಸೋದರಳಿಯನಾಗಿದ್ದ ತಿರುಕ್ಕೊರುಹೈಪಿರಾನ್ ಶಠಕೋಪರು ಎಂಬುವರನ್ನು ತಮ್ಮ ಪೀಠಕ್ಕೆ ನೇಮಿಸಿ, ತಮ್ಮ ಶಿಷ್ಯ ಮಂಡಲಿಯಲ್ಲಿ ಪರಮವೇದಾಂತಿಗಳಾದ ೭೪ ಮಂದಿ ಶಿಷ್ಯರನ್ನು ವಂಶ ಪರಂಪರೆಯಾಗಿ ಈ ಕೆಲಸಕ್ಕೆ ನೇಮಕಮಾಡಿದರು ಶ್ರೀಮದಾಚಾರ್ಯರವರ ದಿವ್ಯ ಮಂಗಳ ವಿಗ್ರಹಗಳು, ಈಗಲೂ ಶ್ರೀರಂಗ, ಶ್ರೀ ಪೆರಂಬೂಧೂರು (ಭೂತಪುರಿ) ತಿರುಪತಿ, ತಿರುನಾರಾಯಣಪುರ, ಬೇಲೂರು

ಮೊದಲಾದ ಎಲ್ಲಾ ದಿವ್ಯ ಕ್ಷೇತ್ರಗಳಲ್ಲಿ ಇರುತ್ತವೆ ಈ ಮಹಾಪುರುಷರು ಶೇಷಾಂಶರಾಗಿ ಅವತರಿಸಿ, ೧೨೦ ವರ್ಷಗಳ ಕಾಲ ಶ್ರೀವಿಶಿಷ್ಟಾದ್ವೈತ ಮತವು ಆಸೇತು ಹಿಮಾಚಲ ಪರ್ಯಂತರ ವ್ಯಾಪಿಸುವಂತೆ ಮಾಡಿ, ಶಾ॥ ಶ॥ ೧೦೫೯ (ಕ್ರಿ॥ ಶ॥ ೧೧೩೭)ರಲ್ಲಿ (ಮಾಘ ಶುದ್ಧ ದಶಮಿ), ಶ್ರೀಶನ ಪರಮಾನುಗ್ರಹವನ್ನು ಪಡೆದು, ಪರಂಧಾಮವನ್ನೈದಿದರು ಹೇಯಪ್ರತ್ಯನೀಕಸ್ವಭಾವನಾದ ವಿಷ್ಣುವಿನ ಅಂಶಭೂತರಾದ ಈ ಮಹಾನುಭಾವರಲ್ಲಿ, ಜಿತೇಂದ್ರಿಯತ್ವವೂ, ಕಾರ್ಯೋತ್ಸಾಹವೂ, ಬಲವೂ, ದಯಾಸ್ವಭಾವವೂ, ಕೃತಜ್ಞತೆಯೂ, ಮತ್ತು ಅಸಾಧಾರಣ ಮಹಿಮೆಯೂ, ನೆಲೆಗೊಂಡಿತ್ತೆಂದು, ಘಂಟಾಘೋಷವಾಗಿ ಹೇಳಬಹುದು

ಅವತಾರ ಪುರುಷರಾದ ಈ ಮಹನೀಯರ ಕಾಲವು ಮುಗಿದ ನಂತರ, ಇವರಿಂದ ನೇಮಿಸಲ್ಪಟ್ಟ ೭೪ ಮಂದಿ ಶಿಷ್ಯರು ವಂಶ ಪರಂಪರಯಾಗಿ ಅವರವರ ಪೀಠಗಳನ್ನು ಅಲಂಕರಿಸಿ, ಶ್ರೀ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಚುರಪಡಿಸಿದರು

ತರುವಾಯ ತೂಪ್ಪಿಲ್ ಪಿಳ್ಳೆಯಾಗಿ, ಅನಂತಸೂರಿ ಮತ್ತು ತೋತಾರಂಬಾ ಎಂಬ ದಂಪತಿಗಳಿಗೆ ಪುತ್ರರತ್ನವಾಗಿ ಅವತರಿಸಿ, ಬಹು ಖ್ಯಾತಿಯನ್ನು ಪಡೆದು, ಶ್ರೀರಂಗನಾಥನಿಂದ ವೇದಾಂತಾಚಾರ್ಯ, ಕವಿತಾರ್ಕಿಕ ಕೇಸರಿ, ಸರ್ವತಂತ್ರ ಸ್ವತಂತ್ರೇತ್ಯಾದಿ ಬಿರುದುಗಳಿಂದ ಭೂಷಿತರಾಗಿ, ತಿರುವೇಂಗಡಮುಡೈಯಾನನ ಘಂಟಾಂಶ ಸಂಭೂತರಾಗಿ ಪ್ರಸಿದ್ಧಿಹೊಂದಿದ, ಶ್ರೀನಿಗಮಾಂತ ಮಹಾದೇಶಿಕರವರು ಶ್ರೀಮದ್ರಹಸ್ಯತ್ರಯಸಾರವೇ ಮುಂತಾದ ೧೨೧ ಸದ್ಗ್ರಂಥಗಳನ್ನು ರಚಿಸಿ, ಶಿಷ್ಯರಿಗೆ ತತ್ತ್ವೋಪದೇಶವಂ ಮಾಡಿ, ಪತಿತಪಾಮರ ವರ್ಗವನ್ನು ಉದ್ಧರಿಸಿ, ಶ್ರೀ ಭಾಷ್ಯಕಾರರ ಸಿದ್ಧಾಂತವನ್ನು ಚೆನ್ನಾಗಿ ಬೇರೂರುವಂತೆ ಮಾಡಿ, ಈಗ ಶ್ರೀ ಪರಕಾಲ ಮಠದಲ್ಲಿ ಬಿಜಮಾಡಿಸಿರುವ, ಶ್ರೀ ಹಯಗ್ರೀವ ಮೂರ್ತಿಯನ್ನು ಆರಾಧಿಸುತ್ತಾ, ಈ ಲೋಕದಲ್ಲಿ ಅಸಾಧಾರಣವಾದ ಪೂಜ್ಯತೆಯನ್ನು ಹೊಂದಿದರು

" ರಾಮಾನುಜಸ್ಸಪ್ತಶತ್ಯೈರ್ಯತೀನಾಂ ಪೀಠೈಶ್ಚತುಸ್ಸಪ್ತತಿಭಿಸ್ಸಮೇತಃ । ಏಕಾಂತಿಭಿರ್ದ್ವಾದಶಭಿಸ್ಸಹಸ್ರೈಶ್ಶ್ರೀರಂಗ ಆಸ್ತೇ ಯತಿಸಾರ್ವಭೌಮಃ ॥" ಎಂಬಂತೆ ಲೋಕಗುರುವಾದ ಈ ಯತೀಂದ್ರರಿಗೆ, ಶಿಷ್ಯರನೇಕರಾದರೆಂಬುವುದು, ಲೋಕವಿಖ್ಯಾತವಾಗಿರುವುದು

| | |
|---|---|
| ಅದರಲ್ಲಿ ಸಿಹ್ಮಾಸನಾಧಿಪತಿಗಳು | ೭೪ |
| ಜೀಯರೆನಿಸುವ ಯತಿಗಳು | ೭೦೦ |
| ಏಕಾಂತಿಗಳು | ೧೨೦೦೦ |
| ಶ್ರೀ ಭಾಷ್ಯ ಸಿಹ್ಮಾಸನ ಸ್ಥಾಪಕರು | ೪ |

ಈ ಯತೀಂದ್ರರೊಬ್ಬರಿಗೆ ಅಪರಿಮಿತವಾದ ಭಕ್ತಶಿಷ್ಯರು ಇರುವಲ್ಲಿ, ಶಾಖೋಪಶಾಖೆಯಾಗಿ ಹರಡಿರುವ ಅವರ ಶಿಷ್ಯ, ಪ್ರಶಿಷ್ಯರು ಎಷ್ಟೆಂಬುದನ್ನು ನಿರ್ಧರಿಸಲು ಸಾಧ್ಯವಿಲ್ಲವು ಇವರಲ್ಲಿ ಪ್ರಮುಖರಾದ ಶ್ರೀ ವೇದಾಂತ ದೇಶಿಕರವರ ಚರಿತ್ರವನ್ನು ಮುಂದೆ ಸಂಕ್ಷೇಪವಾಗಿ ವಿವರಿಸಿದೆ

**ಸಂಪೂರ್ಣಂ**

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

ಜಯತಿ ಭುವಮಶೇಷಾಮಾದರೇಣಾನುಗೃಹ್ಣನ್ನ
ನುಪಧಿ ಯತಿರಾಜಃ ಪನ್ನಗೇಶಾವತಾರಃ ।
ಜಯತಿ ಕುಮತ ಮಾಯಾ ಯಾಮಿನೀ ಪೂರ್ವಸನ್ಧ್ಯಾ ಕೃತ
ಸಕಲ ವಿಬೋಧಾ ನಿರ್ಮಲಾ ತಸ್ಯ ಸೂಕ್ತಿಃ ॥

# ಶ್ರೀಮಾನ್ ವೇದಾಂತ ದೇಶಿಕರವರ ಚರಿತ್ರವು

---

ಶ್ರೀಮನ್ನಾರಾಯಣನ ಶಯ್ಯಾರೂಪಿಯಾದ ಆದಿಶೇಷನ ಅವತಾರವಾದ ಶ್ರೀರಾಮಾನುಜಾಚಾರ್ಯರು ಭಾರತದೇಶದ ಸನಾತನ ವೈದಿಕ ಧರ್ಮಗಳನ್ನು ಪ್ರತಿಪಾದಿಸುವ ಶ್ರೀವಿಶಿಷ್ಟಾದ್ವೈತ ಸಿದ್ಧಾಂತಾನುಸಾರಿಯಾದ ಸಂಪ್ರದಾಯವನ್ನು ಸ್ಥಿರೀಕರಿಸಿ, ಅಸ್ಮದಾದಿಗಳಿಗೆ ಬೋಧಿಸಲು ಮುಖ್ಯವಾದ ೭೪ ಸಿಹಾಸನಾಧಿಪತಿಗಳೆಂಬ ಪೀಠಸ್ಥರನ್ನು ನಿಯಮಿಸಿದರು ಇವರು ಆಚಾರ್ಯರ ನಿಯಮನದಂತೆ ಸತ್ಸಂಪ್ರದಾಯ ಶುದ್ಧವಾದ ರೀತಿಯಲ್ಲಿ ತಾವೂ ಅನುಷ್ಠಿಸಿ, ಶಿಷ್ಯ ಪ್ರಶಿಷ್ಯರಿಗೂ ಬೋಧಿಸಿ, ಲೋಕೋಪಕಾರವನ್ನು ಮಾಡುತಲಿದ್ದರು ಕೆಲವು ಕಾಲಾನಂತರ ಇತರ ಮತಗಳು ಹುಟ್ಟಿ ಜನಗಳು ನಾನಾವಿಧವಾದ ಬೋಧನೆಗೆ ಒಳಪಟ್ಟುದರಿಂದಲೂ ಮುಸಲ್ಮಾನರು ದೇಹಲಿಯಿಂದ ದಕ್ಷಿಣ ದೇಶಕ್ಕೆ ಆಗಾಗ ದಂಡೆತ್ತಿ ಬಂದು ದೇವಸ್ಥಾನಗಳನ್ನು ಲೂಟಮಾಡಿ ನೆಲಸಮ ಮಾಡಿ ಜನಗಳಿಗೆ ನೆಮ್ಮದಿ ಇಲ್ಲದಂತೆ ಮಾಡಿದುದರಿಂದಲೂ, ಅನಾದಿಯಾಗಿ ಶ್ರೀರಂಗ ಮುಂತಾದ ದಿವ್ಯ ಸ್ಥಳಗಳಲ್ಲಿ ವಾಸಿಸುತಲಿದ್ದ ಶ್ರೀವೈಷ್ಣವರ ಸ್ಥಿತಿಯು ಭಯಂಕರ ಪರಿಣಾಮಕ್ಕೆ

ಒಳಗಾಗಿ, ಈ ಮತವು ಅಲ್ಲಲ್ಲಿ ಖಿಲವಾಗುತ್ತ ಬಂದಿತು  ಹೀಗಿರಲು ಶಾಲಿವಾಹನ ಶಕ ೧೧೯೧ನೆಯ ಸಂವತ್ಸರಕ್ಕೆ ಸರಿಯಾದ ಕ್ರಿಸ್ತ ಶಕ ೧೨೬೮-೯ನೆಯ ಶತಮಾನದಲ್ಲಿ, ಕಂಚಿಗೆ ಸೇರಿದ ತೂಪ್ಪಿಲ್ ಎಂಬ ಸ್ಥಳದಲ್ಲಿ, ಪುಂಡರೀಕ ಸೋಮಯಾಜಿಗಳ ವಂಶದ ಅನಂತಾಚಾರ್ಯರಿಗೆ ಸಹಧರ್ಮಚಾರಿಣಿಯಾಗಿದ್ದ ತೋತಾರಂಬಾ ಎಂಬಾಕೆಯಲ್ಲಿ, ಜಗದ್ಧಿತಾರ್ಥವಾಗಿಯೂ, ಪುತ್ರರತ್ನವಾಗಿಯೂ, ಈ ಕೆಳಗೆ ವಿವರಿಸಿರುವ ಶ್ಲೋಕದಂತೆ, ಶ್ರೀಮದ್ವೇದಾಂತ ದೇಶಿಕರವರು ತಿರುಮಲೈ ಶ್ರೀ ಶ್ರೀನಿವಾಸನ ಘಂಟಾಂಶ ಸಂಭೂತರಾಗಿ ಅವತರಿಸಿದರು

"ವಿತ್ರಾಸಿನೀ ವಿಬುಧವೈರಿವರೂಧಿನೀನಾಂ
ಪದ್ಮಾಸನೇನ ಪರಿಚಾರ ವಿಧೌ ಪ್ರಯುಕ್ತಾ ।
ಉತ್ಪ್ರೇಕ್ಷ್ಯತೇ ಬುಧಜನೈರುಪಪತ್ತಿ ಭೂಮ್ನಾ
ಘಂಟಾಹರೇಃ ಸಮಜನಿಷ್ಟಯದಾತ್ಮನೇತಿ ॥"

ಇವರಿಗೆ ವೇಂಕಟೇಶನೆಂದು ನಾಮಕರಣವಂ ಮಾಡಿದರು. ಇವರು ಐದನೆಯ ವರ್ಷದಲ್ಲಿ ಮಾತುಳರಾದ ಆತ್ರೇಯ ರಾಮಾನುಜಾಚಾರ್ಯರಿಂದ ವಿದ್ಯಾಭ್ಯಾಸ ಮಾಡಲು ಉಪಕ್ರಮಿಸಿ, ಇಪ್ಪತ್ತನೆಯ ವರುಷದೊಳಗಾಗಿ, ವೇದವೇದಾಂತ ಪಾರಂಗತರಾದರು ಅನಂತರ ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ಕೊಂಚ ಕಾಲ ಸಂಸಾರ ಸಮೇತ ಕಂಚಿಯಲ್ಲಿದ್ದು, ತರುವಾಯ ಶ್ರೀ ಪೆರಂಬೂದೂರ್, ಶ್ರೀರಂಗ, ತಿರುಪತಿ, ತಿರುವಹೀಂದ್ರಪುರ, ಮಧುರ, ತಿರುವಲ್ಲಿಕ್ಕೇಣಿ, ಸತ್ಯಮಂಗಲ, ಕೊಳ್ಳೇಗಾಲ, ತಿರುನಾರಾಯಣಪುರವೇ ಮೊದಲಾದ ಪುಣ್ಯಕ್ಷೇತ್ರಗಳಲ್ಲಿ ಯಾತ್ರೆಯಂ ಮಾಡಿ, ಅಲ್ಲಲ್ಲಿಯ ದೇವತಾಮೂರ್ತಿಗಳ ವಿಷಯಗಳಲ್ಲಿ ಮಂಗಳಾಶಾಸನವಂ ಮಾಡಿರುವುದು, ಎಲ್ಲರಿಗೂ ತಿಳಿದ ಅಂಶವಾಗಿದೆ  ಕೆಲವು ಕಾಲದ ಮೇಲೆ ಈ ಭಾಗವತೋತ್ತಮರು ಶ್ರೀರಂಗಕ್ಕೆ ದಯಮಾಡಿಸಿ, ಅಲ್ಲಿಯ ವಿದ್ವನ್ಮಂಡಲಿಯಲ್ಲಿ ತಾವು ರಚಿಸಿದ ಭಗವತ್ಸ್ವರೂಪ ಪ್ರತಿಪಾದಕಗಳಾದ ಸ್ತೋತ್ರಗಳು, ವೇದಾಂತ ಗ್ರಂಥಗಳು ಮೊದಲಾದ ಪರಶ್ಶತ ಗ್ರಂಥಗಳನ್ನು ಘಂಟಾಘೋಷವಾಗಿ ತಿಳಿಯಹೇಳಿ, ಶ್ರೀರಂಗನಾಥನಿಂದ "ವೇದಾಂತಾಚಾರ್ಯರು

ಮತ್ತು ಕವಿತಾರ್ಕಿಕ ಕೇಸರಿ'' ಎಂಬ ಬಿರುದನ್ನೂ, ಶ್ರೀರಂಗನಾಯಕಿ ಯಿಂದ ''ಸರ್ವತಂತ್ರ ಸ್ವತಂತ್ರರೆಂ''ಬ ಬಿರುದನ್ನೂ ಹೊಂದಿ, ಅವರಿರ್ವ ರಿಂದಲೂ ಅನುಗ್ರಹಿಸಲ್ಪಟ್ಟರು ಈ ಮಹನೀಯರು ತಮ್ಮ ಜೀವಿತ ಕಾಲದಲ್ಲಿ ಖ್ಯಾತಿಲಾಭ ಪೂಜೆಗಳನ್ನು ತೃಣೀಕರಿಸಿ, ಶ್ರೀಮನ್ನಾರಾಯಣ ನಲ್ಲಿ ಅತ್ಯಂತ ಭಕ್ತಿನಿರತರಾಗಿ, ಭಗವದ್ಭಕ್ತರಿಗೆ ಭಕ್ತಿಮಾರ್ಗ ಸೋಪಾನ ವನ್ನೂ, ಮುಕ್ತಿ ಮಾರ್ಗವನ್ನೂ ಪ್ರದರ್ಶಿಸುತ್ತಾ, ಭಗವದ್ಭಾಗವತ ಕೈಂಕ ರ್ಯದಲ್ಲಿ ನಿರತರಾಗಿದ್ದರು ಇವರು ಮಾನವರ ಜನ್ಮವಂ ಸಾರ್ಥಕಗೊಳಿಸ ಲೋಸುಗ ಶ್ರೀ ವಿಶಿಷ್ಟಾದ್ವೈತ ಸಿದ್ಧಾಂತದ ಮೇಲೆ, ಅಮೂಲ್ಯವಾದ ಅನೇಕ ಉದ್ಗ್ರಂಥಗಳಂ ರಚಿಸಿ, ಲೋಕೋಪಕಾರವಂ ಮಾಡಿ, ಶ್ರೀ ಭಗ ವದ್ರಾಮಾನುಜಾಚಾರ್ಯರ ಅನಂತರ ಈ ಮಹಾಪುರುಷರೇ, ಆಚಾರ್ಯ ಪುರು ಷರುಗಳಲ್ಲಿ ಅಗ್ರಸ್ಥಾನವಂ ಪಡೆದರು ಈ ಕವಿಪುಂಗವರು ಶ್ರೀ ಹಯ ಗ್ರೀವಸ್ತೋತ್ರ, ಗರುಡಪಂಚಾಶತ್, ಅಚ್ಯುತಶತಕಂ, ರಘುವೀರಗದ್ಯಂ, ಗೋಪಾಲವಿಂಶತಿ, ವರದರಾಜ ಪಂಚಾಶತ್, ಶ್ರೀವೈಷ್ಣವ ದಿನಚರಿ, ಹಸ್ತಿಗಿರಿ ಮಾಹಾತ್ಮ್ಯಂ, ಯಥೋಕ್ತಕಾರಿ ಸ್ತೋತ್ರಂ, ಪರಮಾರ್ಥಸ್ತುತಿ, ದಯಾಶತಕಂ, ವೈರಾಗ್ಯಪಂಚಕಂ, ಭಗವಧ್ಯಾನ ಸೋಪಾನಂ, ಶತದೂ ಷಣೀ, ಶ್ರೀಸ್ತುತಿ, ಭೂಸ್ತುತಿ, ದಶಾವತಾರ ಸ್ತೋತ್ರಂ, ಯತಿರಾಜ ಸಪ್ತತಿ, ತತ್ವಟೀಕ, ಗೀತಾತಾತ್ಪರ್ಯ ಚಂದ್ರಿಕಾ, ನೇಶ್ವರ ಮಿಮಾಂಸೆ, ರಹಸ್ಯರಕ್ಷಾ, ಸಂಕಲ್ಪಸೂರ್ಯೋದಯ, ಯಾದವಾಭ್ಯುದಯ, ಹಂಸ ಸಂದೇಶ, ತತ್ವಪದವಿ, ತತ್ವಮುಕ್ತಾಕಲಾಪ, ಸರ್ವಾರ್ಥಸಿದ್ಧಿ, ಪಾದುಕಾ ಸಹಸ್ರ, ದ್ರವಿಡೋಪನಿಷತ್ ತಾತ್ಪರ್ಯರತ್ನಾವಳಿ, ತತ್ವಸಂದೇಶ, ಅಭೀ ತಸ್ತವ, ರಹಸ್ಯತ್ರಯಸಾರ, ಅಧಿಕರಣ ಸಾಲಾವಳಿ ಮುಂತಾದ ಭಕ್ತಿ, ಜ್ಞಾನ, ವೈರಾಗ್ಯತತ್ವಗಳನ್ನು ಬೋಧಿಸುವ ೧೨೧ ಸದ್ಗ್ರಂಥಗಳನ್ನು ಸಪ್ರಮಾಣವಾಗಿ ರಚಿಸಿ, ಒಂದುನೂರು ವರ್ಷಗಳ ಮೇಲೆ ಜೀವಂತರಾ ಗಿದ್ದು ಕ್ರಿ॥ ಶ॥ ೧೩೭೯ ರಲ್ಲಿ ಪರಮಪದವಂ ಹೊಂದಿದರು ಗುಣಗ್ರ ಹಣಮಾಡುವ ವಿದ್ಯಾವಂತರು ನಿರ್ಮತ್ಸರರಾಗಿ ಈ ಸದ್ಗ್ರಂಥಗಳನ್ನು ಪರಿಶೀಲಿಸಿ ನೋಡಿದಲ್ಲಿ ಸಂಪ್ರದಾಯಸಿದ್ಧವಾದ ಸದಾಚಾರವನ್ನು ಚೆನ್ನಾಗಿ ಬಲ್ಲ ಈ ಮಹನೀಯರ ಭಗವತ್ಪ್ರಾವಣ್ಯವೂ, ವಿದ್ಯಾ ಪ್ರೌಢಿ

ಮೆಯೂ, ಜ್ಞಾನ ವೈರಾಗ್ಯನಿಷ್ಠೆಗಳೂ ಅವಿಚ್ಛಿನ್ನವಾದ ಸನ್ಮಾರ್ಗ ಪ್ರವರ್ತನೆಯೂ, ಯಾವರೀತಿ ಇದ್ದುವೆಂಬುದು ವ್ಯಕ್ತವಾಗುವುದು ಶ್ರೀ ವೇಂಕಟನಾಥಾರ್ಯರೆಂದು ಸುಪ್ರಸಿದ್ಧರಾದ ಈ ಮಹಾ ಪುರುಷರ ಅವತಾರದ ಸಚ್ಚರಿತ್ರವು ಭರತಖಂಡದಲ್ಲಿಯ ವಿಷ್ಣುದೇವಾಲಯಗಳಲ್ಲಿ ಈಗಲೂ ಉದ್ಘೋಷಿಸಲ್ಪಡುತ್ತಿರುವುದೂ, ಇದಕ್ಕೆ ದೃಷ್ಟಾಂತವಾಗಿದೆ

ಸಂಪೂರ್ಣಂ



— ಶ್ರೀಃ —

ಶ್ರೀಮತೇ ರಾಮಾನುಜಾಯ ನಮಃ

ಶ್ರೀ ಯದುಗಿರಿ ನಾರಾಯಣ ಪರಬ್ರಹ್ಮಣೇ ನಮಃ

# ಶ್ರೀ ಯಾದವಗಿರಿ (ತಿರುನಾರಾಯಣಪುರಂ) ಮಾಹಾತ್ಮ್ಯದ ಸಾರಸಂಗ್ರಹವು



ಶ್ರೀ ಕಲ್ಯಾಣೀ ವಿಲಸದ್ಯದುಗಿರಿ ನಾರಾಯಣಾರ್ತಿ ಕಲ್ಪತರೂ।
ಸಂಪತ್ಕುಮಾರ ಭವತೇ ನಿತ್ಯಶ್ರೀರ್ನಿತ್ಯಮಂಗಳಂ ಭೂಯಾತ್ ॥
ಕಮಲಾಕುಚ ಕಸ್ತೂರೀ ಕರ್ದಮಾಂಕಿತ ವಕ್ಷಸೇ।
ಯಾದವಾದ್ರಿ ನಿವಾಸಾಯ ಸಂಪತ್ಪುತ್ರಾಯ ಮಂಗಳಂ ॥

ಶ್ರಿಯಃಪತಿಯಾದ ಶ್ರೀಮನ್ನಾರಾಯಣನಿಗೆ ಆವಾಸಸ್ಥಾನವಾದ ಭೂವೈಕುಂಠವೆಂದು ಕರೆಯಲ್ಪಡುವ ಯಾದವಗಿರಿಯ ಮಾಹಾತ್ಮ್ಯವು ಶ್ರೀ ನಾರದಪುರಾಣ, ಮತ್ಸ್ಯಪುರಾಣ, ಪಾದ್ಮಪುರಾಣ ಮೊದಲಾದ ಸದ್ಗ್ರಂಥಗಳಲ್ಲಿ ವರ್ಣಿಸಲ್ಪಟ್ಟಿರುವುದು ಇದು ಬ್ರಹ್ಮನಿಂದ ಸನತ್ಕುಮಾರನಿಗೂ, ಅವನಿಂದ ನಾರದನಿಗೂ, ದೇವರ್ಷಿಯಾದ ನಾರದನಿಂದ

ವ್ಯಾಸಾದಿ ಮಹರ್ಷಿಗಳಿಗೂ ಉಪದೇಶಿಸಲ್ಪಟ್ಟಿತು ಈ ಪುರಾಣದ ಪಠನ ಶ್ರವಣಾದಿಗಳಿಂದ ಉಂಟಾಗುವ ಪುಣ್ಯ ವಿಶೇಷವು ಅಸಾಧಾರಣವಾದುದು ಇದು ಈ ಮಾಹಾತ್ಮ್ಯದಿಂದಲೇ ಪ್ರತಿವಾದಿತವಾಗಿರುವುದು

ಈ ಕ್ಷೇತ್ರವು ಸಹ್ಯಪರ್ವತಕ್ಕೆ ಪೂರ್ವದಿಕ್ಕಿನಲ್ಲಿಯೂ, ಗಂಗಾನದಿಗೆ ದಕ್ಷಿಣದಿಕ್ಕಿನಲ್ಲಿಯೂ, ಕಾವೇರಿ ನದಿಯ ಪಕ್ಕದಲ್ಲಿಯ ಶ್ರೀರಂಗನಾಥಕ್ಷೇತ್ರಕ್ಕೆ ಸಮೀಪದಲ್ಲಿ ಇರುವುದು. ಈ ನಾರಾಯಣಾದ್ರಿಯಲ್ಲಿ ಬ್ರಹ್ಮನು ಶ್ರೀಮನ್ನಾರಾಯಣನನ್ನು ತಪಸ್ಸಿನಿಂದಲೂ, ಪೂಜಾವಿಧಾನದಿಂದಲೂ ಪೂಜಿಸಿ, ಅವನ ಅನುಗ್ರಹದಿಂದ ಪುರುಷಾರ್ಥಗಳಂ ಪಡೆದು, ಧನ್ಯನಾದನು ಶಾಂಡಿಲ್ಯನೆಂಬ ಋಷಿಯು ಈ ನಾರಾಯಣಾದ್ರಿಯಲ್ಲಿ ಭಗವಂತನ ಪ್ರೇರಣೆಯಿಂದ ತಪಸ್ಸು ಮಾಡಿ ಸಿದ್ಧಿಹೊಂದಿದುದರಿಂದ ಇದನ್ನು ದಕ್ಷಿಣ ಬದರಿಕಾಶ್ರಮವೆಂದು ಕರೆಯುವರು ಇಲ್ಲಿ ನೆಲೆಸಿರುವ ಶ್ರಿಯಃಪತಿಯನ್ನು, ಆದಿಶೇಷನು ಕೃತಯುಗದಲ್ಲಿ ಅನಂತರೂಪನಾಗಿಯೂ, ತ್ರೇತಾಯುಗದಲ್ಲಿ ಲಕ್ಷ್ಮಣನಾಗಿಯೂ, ದ್ವಾಪರಯುಗದಲ್ಲಿ ಬಲರಾಮನಾಗಿಯೂ, ಕಲಿಯುಗದಲ್ಲಿ ಶೇಷಾಂಶ ಸಂಭೂತರಾದ ಶ್ರೀ ರಾಮಾನುಜಾಚಾರ್ಯರಾಗಿಯೂ ಅವತರಿಸಿ, ನಿರತಿಶಯವಾಗಿ ಸೇವಿಸುತ್ತಲಿದ್ದನು ಅಲ್ಲದೆ ಈ ಪುಣ್ಯಕ್ಷೇತ್ರವು ಸನತ್ಕುಮಾರನಿಂದ ಕೃತಯುಗದಲ್ಲಿ ನಾರಾಯಣಾದ್ರಿ ಎಂದೂ, ತ್ರೇತಾಯುಗದಲ್ಲಿ ದತ್ತಾತ್ರೇಯನಿಂದ ವೇದಾದ್ರಿ ಎಂದೂ, ದ್ವಾಪರಯುಗದಲ್ಲಿ ಶ್ರೀ ರಾಮಕೃಷ್ಣರಿಂದ ಯಾದವಾದ್ರಿ ಎಂದೂ, ಕಲಿಯುಗದಲ್ಲಿ ಶ್ರೀ ರಾಮಾನುಜಾಚಾರ್ಯರಿಂದ ಯತಿಶೈಲವೆಂದೂ, ಪ್ರಸಿದ್ಧಿಹೊಂದಿರುವುದು

ಶ್ರೀ ವೈಕುಂಠದಲ್ಲಿ ಶ್ರೀಮನ್ನಾರಾಯಣನು ಹೇಗೆ ನೆಲೆಸಿರುವನೋ ಹಾಗೇ, ಈ ದಕ್ಷಿಣ ಬದರಿಕಾಶ್ರಮದಲ್ಲಿ ಶ್ರೀಮದಷ್ಟಾಕ್ಷರಮಂತ್ರ ಪ್ರತಿಪಾದ್ಯನಾದ ಭಗವಂತನು, ಈ ಕಲಿಯುಗದಲ್ಲಿ ಸಮಸ್ತ ಜೀವರಾಶಿಗಳನ್ನು ರಕ್ಷಿಸುತ್ತಲೂ, ತನ್ನ ಆಶ್ರಿತರ ಪಾಪಗಳಂ ಪರಿಹರಿಸುತ್ತಲೂ, ವಾತ್ಸಲ್ಯಯುಕ್ತನಾಗಿಯೂ, ಅಭಯಪ್ರದನಾಗಿಯೂ, ಭಕ್ತರಾದ ಚೇತನರಿಗೆ ಮೋಕ್ಷೈಶ್ವರ್ಯವನ್ನು ದಯಪಾಲಿಸುತ್ತಲೂ, ನೆಲಸಿರುವನು ಸರ್ವ

ಲೋಕ ಶರಣ್ಯನಾದ ಈ ಪರಮಪುರುಷನು, ತನಗೆ ಶೇಷಭೂತಗಳಾದ ಅಖಿಲಾಂಡಕೋಟಿ ಬ್ರಹ್ಮಾಂಡಗಳಿಗೂ ಶೇಷಿಯೆನಿಸಿಕೊಂಡು, ಭೂ, ವೈಕುಂಠವೆಂಬ ಯಾದವಗಿರಿಯಲ್ಲಿ ಅವತರಿಸಿ ತನ್ನ ಭಕ್ತರಿಗೆ ಇಹಲೋಕದಲ್ಲಿ ಆಯುರಾರೋಗ್ಯೈಶ್ವರ್ಯಗಳಿಂದ ಆನುಷಂಗಿಕ ಸುಖವನ್ನೂ, ಪರಲೋಕದಲ್ಲಿ ಅನಿತರ ಸಾಧಾರಣವಾದ ನಿತ್ಯಸುಖವನ್ನೂ, ಅನುಗ್ರಹಿಸುತ್ತಲಿರುವನು ಇಂತಹ ಪೂರ್ಣಕಾಮನಾದ ಮಹಾನುಭಾವನನ್ನು ಬ್ರಹ್ಮನೇ ಮೊದಲಾದವರೂ, ನಿತ್ಯಸೂರಿಗಳೂ, ಅನೇಕ ಮಹರ್ಷಿಗಳೂ, ಶ್ರೀ ರಾಮಾನುಜಾಚಾರ್ಯರವರೂ, ಪರಮ ವೇದಾಂತಿಗಳಾದ ಪೂರ್ವಾಚಾರ್ಯರೇ ಮುಂತಾದ ಭಗವದ್ಭಕ್ತರೂ ಆರಾಧಿಸುತ್ತ, ಶ್ರೀಶನ ಪರಮಾನುಗ್ರಹದಿಂದ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆದರೆಂಬುದು ಜಗದ್ವಿದಿತವಾಗಿರುವುದು

ಪೂರ್ವದಲ್ಲಿ ಭಗವದಂಶದಿಂದ ಅವತರಿಸಿದ ಪರಾಶರ ಪುತ್ರರಾದ ವೇದವ್ಯಾಸರು, ವಸಿಷ್ಠರು, ಗೌತಮರೇ ಮುಂತಾದ ಮಹರ್ಷಿಗಳು ಉತ್ತರ ಬದರಿಕಾಶ್ರಮದಲ್ಲಿ ನರನಾರಾಯಣ ರೂಪಿಯಾದ ಶ್ರೀಮನ್ನಾರಾಯಣನ ಸಾನ್ನಿಧ್ಯವನ್ನು ಹೊಂದಿ, ಪರಮ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರಾದಿಗಳನ್ನೆಸಗಿ, ಆತನನ್ನು ವೇದಾಂತ ವಾಕ್ಯಗಳಿಂದ ನುತಿಸಿ, ಆತ್ಮಾರಾಮನಾದ ಆ ಪರಮಪುರುಷನ ಅನುಗ್ರಹವಂ ಪಡೆದು ಬೇಡಿಕೊಂಡರು ಎಲೈ ಸ್ವಾಮಿಯೇ ಮತ್ತು ಆಪದ್ಬಂಧುವೆ ! "ಈಗ ಸಮಸ್ತ ಭೂಮಿಯೂ ಕಲಿದೋಷದಿಂದ ದೂಷಿತವಾಗಿರುವುದು. ಧರ್ಮದಲ್ಲಿ ಯಾರೊಬ್ಬರಿಗೂ ದೃಷ್ಟಿಯಿರುವುದಿಲ್ಲವು ಸಮಸ್ತ ದೇಶವೂ ಪಾಷಂಡ ಪ್ರಚುರವಾಗಿರುವುದು ಆದುದರಿಂದ ನಮಗೆ ಜ್ಞಾನ, ಭಕ್ತಿ, ವೈರಾಗ್ಯಗಳು ಸಾಧನೆಗೆ ಉತ್ತಮವಾದ ಸ್ಥಳವು ತಿಳಿಯದೆ ನಾವು ಭ್ರಾಂತರಾಗಿರುವೆವು ದಯಮಾಡಿ ಅಂತಹ ಕಲಿದೋಷ ನಿರ್ಮುಕ್ತವಾದ ಕ್ಷೇತ್ರವನ್ನು ನಮಗೆ ತಿಳಿಸಿದಲ್ಲ ಅಲ್ಲಿ ನಾವು ನಿಷ್ಕಲ್ಮಷಚಿತ್ತರಾಗಿ ನಮಗೆ ಉತ್ತರೋತ್ತರಾಭ್ಯುದಯವನ್ನು ಅನುಗ್ರಹಿಸುವ ನಿನ್ನನ್ನು ತಪೋಧ್ಯಾನಾರ್ಚನಾದಿಗಳಿಂದ ಆರಾಧಿಸುತ್ತ, ನಿನ್ನ ಪರಮಾನುಗ್ರಹಕ್ಕೆ ಪಾತ್ರರಾಗಿ, ಕಾಲವಂ ಕಳೆದು ಕೃತಕೃತ್ಯರಾಗು

ವೆವು'' ಎಂದು, ಬಿನ್ನವಿಸಿದರು. ಬಂದಂತಹ ಋಷಿಪುಂಗವರನ್ನು ಕುಶಲ ಪ್ರಶ್ನಾದಿಗಳಿಂದ ಗೌರವಿಸಿ ಅವರ ಪ್ರಾರ್ಥನೆಯಿಂದ ಸಂತುಷ್ಟನಾದ ಶ್ರೀಮನ್ನಾರಾಯಣನು, ಎಲೈ ತಾಪಸರಿರಾ! ''ಗಂಗಾನದಿಗೆ ದಕ್ಷಿಣ ದಿಕ್ಕಿನ ಮತ್ತು ಕಾವೇರಿ ನದಿಗೆ ಸಮೀಪದಲ್ಲಿನ ದಕ್ಷಿಣ ದೇಶದಲ್ಲಿ ನಿತ್ಯಸೂರಿಗಳಿಗೆ ಆಶ್ರಯವಾದ ''ನಾರಾಯಣಗಿರಿ'' ಎಂಬ ಸುಪ್ರಸಿದ್ಧವಾದ ದಿವ್ಯ ಕ್ಷೇತ್ರವಿರುವುದು ಇದು ಅನೇಕ ಶಿಖರಗಳಿಂದಲೂ, ಗೈರಿಕಾದಿ ಧಾತುಗಳಿಂದಲೂ, ಮಹೋನ್ನತವಾದ ವಿವಿಧ ವೃಕ್ಷಗಳ ಸಮೂಹದಿಂದಲೂ, ಪರಿಶುದ್ಧವಾದ ಅನೇಕ ತೀರ್ಥಗಳಿಂದಲೂ, ಪುಣ್ಯಾಶ್ರಮಗಳಿಂದಲೂ. ಫಲಪುಷ್ಪ ಸಮೃದ್ಧಿಗಳಿಂದಲೂ, ನೇತ್ರಾನಂದಕರವಾಗಿ, ಸರ್ವವಿಧ ಸಂಪತ್ತಿಗಳಿಂದಲೂ, ಶೋಭಿಸುತ್ತಲಿರುವುದು ಈ ಪುಣ್ಯಕ್ಷೇತ್ರವು ದಕ್ಷಿಣ ಬದರಿಕಾಶ್ರಮವೆಂದು ಕರೆಯಲ್ಪಟ್ಟು ನನಗೆ ಹೆಚ್ಚಾದ ಪ್ರೀತಿಯನ್ನುಂಟುಮಾಡಿರುವುದು ನಾನು ಇಲ್ಲಿ ನಿತ್ಯಸಾನ್ನಿಧ್ಯವನ್ನು ಹೊಂದಿರುವೆನು ವೈಕುಂಠವಾಸಿಗಳಾದ ಅನಂತ, ಗರುಡ, ವಿಷ್ವಕ್ಸೇನಾದಿಗಳೂ, ಈ ಗಿರಿಯಲ್ಲಿ ತಿರ್ಯಕ್ ಸ್ಥಾವರ ರೂಪಗಳನ್ನಾಶ್ರಯಿಸಿ, ನನ್ನನ್ನು ಸೇವಿಸುತ್ತಲಿರುವರು ಅಂಥ ದಿವ್ಯ ಕ್ಷೇತ್ರಕ್ಕೆ ನೀವು ಹೋಗಿ, ಅಲ್ಲಿ ಶ್ರೀವರಾಹರೂಪಿಯಾದ ನನ್ನ ಶರೀರದಿಂದ ಆವಿರ್ಭವಿಸಿದ ಕಲ್ಯಾಣ ತೀರ್ಥವೆಂಬ ಪುಷ್ಕರಣಿಯಲ್ಲಿ ಮಿಂದು, ನಾರಾಯಣಾದ್ರಿಯ ಶಿಖರದಲ್ಲಿ, ನನ್ನ ಪರಮ ಭಕ್ತನೂ, ಭಾಗವತಾಗ್ರೇಸರನೂ ಆದ ಪ್ರಹ್ಲಾದನಿಂದ ಪ್ರತಿಷ್ಠಿತವಾದ ನೃಸಿಹ್ಮ ರೂಪಿಯಾದ ನನ್ನನ್ನು ಸೇವಿಸಿ, ಕಲ್ಯಾಣತೀರ್ಥದ ದಕ್ಷಿಣಭಾಗದಲ್ಲಿ ಸ್ವಯಂವ್ಯಕ್ತವಾದ ಆನಂದ ವಿಮಾನ ಮಧ್ಯದಲ್ಲಿ ಶೋಭಿಸುವ ಅರ್ಚಾರೂಪಿಯಾದ ನನ್ನನ್ನು ಭಕ್ತಿಭಾವದಿಂದ ನೇವಿಸಿ, ಕೃತಕೃತ್ಯರಾಗಿರಿ'' ಎಂದು, ಅಭಯವನಿತ್ತನು ಇದಂ ಕೇಳಿ, ಭಕ್ತಾಗ್ರಗಣ್ಯರಾದ ಋಷಿಪುಂಗವರು ಶ್ರೀಶನನ್ನು ಪುನಃ ನಮಸ್ಕರಿಸಿ, ಬದ್ಧಾಂಜಲಿ ಪುಟರಾಗಿ ಪ್ರಾರ್ಥಿಸತೊಡಗಿದರು ''ಎಲೈ ಜಗನ್ನಿಯಾಮಕನಾದ ವಿಶ್ವಾತ್ಮನೆ! ನೀನು ನಮಗೆ ಹೇಳಿದ ನಾರಾಯಣಗಿರಿಯ ಮಹಿಮೆಯನ್ನು ಸಂಕ್ಷೇಪವಾಗಿ ಕೇಳಿದೆವು ಇದರಿಂದ ನಾವು ತೃಪ್ತಿಹೊಂದಲಿಲ್ಲವು, ನಮ್ಮ ಮೇಲೆ ಕರುಣೆಯಿಟ್ಟು, ಇದರ ಮಾಹಾತ್ಮ್ಯವನ್ನು ವಿಸ್ತರಿಸಿ ಉಪದೇಶಿಸಬೇಕು'' ಎಂದು,

ನಮ್ರತೆಯಿಂದ ಪ್ರಾರ್ಥಿಸಲು, ಲಕ್ಷ್ಮೀನಿವಾಸನಾದ ಭಗವಂತನು "ಪೂರ್ವದಲ್ಲಿ ಸನತ್ಕುಮಾರನಿಂದ ನಾರದನಿಗೆ ಉಪದೇಶಿಸಲ್ಪಟ್ಟಿದ್ದ, ಈ ಕ್ಷೇತ್ರದ ಮಹಿಮೆಯನ್ನು ನಾರದನಿಂದ ಕೇಳಿ ತಿಳದುಕೊಂಡು ಧನ್ಯರಾಗಿರಿ" ಎಂದು ಹೇಳಿ, ಅಂತರ್ಧಾನವನ್ನೈದಿದನು ವ್ಯಾಸರೇ ಮುಂತಾದ ಮಹರ್ಷಿಗಳೂ ಕೂಡ ಆನಂದ ಬಾಷ್ಪಯುತರಾಗಿ, ಸಂತೋಷದಿಂದ ಪರವಶರಾಗಿ, ದೇವರ್ಷಿಯಾದ ನಾರದನ ಆಗಮನವನ್ನು ಚಾತಕಪಕ್ಷಿಯಂತೆ ನಿರೀಕ್ಷಿಸುತ, ಆ ಉತ್ತರಬದರಿಕಾಶ್ರಮದಲ್ಲಿ ಭಗವತ್ಕೈಂಕರ್ಯವನ್ನೆಸಗುತ್ತಲಿದ್ದರು ಹೀಗಿರುವಲ್ಲ, ಒಂದು ದಿವಸ ವೀಣಾಗಾನರಸಿಕನಾಗಿಯೂ, ಜ್ಞಾನಭಕ್ತಿವೈರಾಗ್ಯಾದಿ ಗುಣಗಳಿಗೆ ಗಣಿಯಾಗಿಯೂ ಇರುವ ನಾರದ ಮಹರ್ಷಿಯು ದೈವಯೋಗದಿಂದ ಆ ಪುಣ್ಯಾಶ್ರಮಕ್ಕೆ ಬಂದು ವೀಣಾಧ್ವನಿಯೊಡನೆ ಕೀರ್ತನೆಗಳನ್ನಾರಂಭಿಸಿ, ಭಗವದ್ಗುಣವನ್ನು ಗಾನಮಾಡುತ್ತ, ಶ್ರೀಮನ್ನಾರಾಯಣನ ಎದುರಿನಲ್ಲ ಭಕ್ತಿಪರವಶನಾಗಿ ಮೈನುರೆತು ನಿಂತನು. ವ್ಯಾಸಾದಿಗಳು ಇದಂ ಕಂಡು, ವಿಧ್ಯುಕ್ತವಾಗಿ ನಾರದನನ್ನು ಸತ್ಕರಿಸಿದರು ನಾರದನೂ ಕೂಡ ಇವರನ್ನು ಪ್ರೀತಿಪೂರ್ವಕವಾಗಿ ಗೌರವಿಸಿ, ಕುಶಲಪ್ರಶ್ನೆಯನ್ನು ಮಾಡಿದನು ತರುವಾಯ ವ್ಯಾಸಾದಿಗಳು ನಾರದನನ್ನು ಕುರಿತು "ನೀನು ಚತುರ್ಮುಖಬ್ರಹ್ಮನ ಶರೀರದಿಂದ ಸಾಕ್ಷಾತ್ತಾಗಿ ಹುಟ್ಟಿ, ಸರ್ವಜ್ಞನಾಗಿರುವುದರಿಂದ ಶ್ರಿಯಃಪತಿಯ ನಿಯಮನದಂತೆ, ನಿನ್ನಿಂದ ಯಾದವಗಿರಿ (ನಾರಾಯಣಗಿರಿ) ಮಾಹಾತ್ಮ್ಯವನ್ನು ವಿಸ್ತಾರವಾಗಿ ಕೇಳಿ ಕೃತಕೃತ್ಯರಾಗಲು, ನಿನ್ನ ಆಗಮನವನ್ನೇ ಬಹಳ ಕುತೂಹಲದಿಂದ ನಾವು ನಿರೀಕ್ಷಿಸುತಲಿದ್ದೆವು ಈಗ ನಮ್ಮ ಪುಣ್ಯೋದಯದಿಂದ ನಿನ್ನ ದರ್ಶನವಾಯಿತು ಆದಕಾರಣ ಕೃಪೆಯಿಟ್ಟು ನಮಗೆ ಇದಂ ವಿಸ್ತಾರವಾಗಿ ಉಪದೇಶಿಸಿ, ನಮ್ಮ ಇಷ್ಟವನ್ನು ನೆರವೇರಿಸು" ಎಂದು ಬೇಡಿದರು ಆ ದೇವರ್ಷಿಯು ತನ್ನ ಮನಸ್ಸಿನಲ್ಲಿ ಶ್ರೀಮನ್ನಾರಾಯಣನನ್ನು ಧ್ಯಾನಿಸಿ, ಋಷಿಗಳ ಪ್ರಾರ್ಥನೆಯಂತೆ, ಪರಮಪವಿತ್ರವಾದ ಯಾದವಗಿರಿಯ ಮಾಹಾತ್ಮ್ಯವನ್ನು ಹೇಳಲು ಉಪಕ್ರಮಿಸಿದನು

ಚಿದಚಿದಾತ್ಮಕನಾಗಿ, ಸರ್ವಾಂತರ್ಯಾಮಿಯಾಗಿರುವ ಶ್ರೀಮನ್ನಾರಾಯಣನು, ಸತ್ವರಜಸ್ತಮೋಗುಣಾತ್ಮಕನಾಗಿ ತನ್ನ ಸಂಕಲ್ಪದಿಂದಲೇ ಈ ಜಗತ್ತನ್ನು ಸಮಷ್ಟಿಯಾಗಿ ತಾನೇ ಸೃಷ್ಟಿಸಿ, ಪರಿಪಾಲಿಸುವನು ಪ್ರಳಯಕಾಲದಲ್ಲಿ ಚರಾಚರಾತ್ಮಕವಾದ ಈ ಪ್ರಪಂಚವು ಭಗವಲ್ಲೀಲೆಯಿಂದ ಸಂಹೃತವಾಗಿ, ಪ್ರಕೃತಿ, ಮಹತ್ತು, ಅಹಂಕಾರಾದಿಯಾಗಿ ಎಲ್ಲಾ ಪ್ರಾಣಿವರ್ಗವೂ ಶ್ರೀಮನ್ನಾರಾಯಣನಲ್ಲಿಯೇ ಲೀನವಾಗುವುವು ನಿಶಾಸುಪ್ತನಾದ ಭಗವಂತನು ನಿದ್ರೆಯಿಂದ ಎಚ್ಚರಗೊಂಡು ಸತ್ವೋದ್ರಿಕ್ತನಾಗಿ ಲೋಕವೆಲ್ಲವೂ ಶೂನ್ಯವಾಗಿಯೂ, ಜಲಮಯವಾಗಿಯೂ, ಇರುವುದನ್ನು ಕಂಡು, ತನ್ನಲ್ಲಿ ಅಣುಗಳಂತೆ ಲೀನವಾಗಿರುವ ಚೇತನರನ್ನು ಅವರವರ ಕರ್ಮಾನುಸಾರವಾಗಿ ಸೃಷ್ಟಿಮಾಡಿ, ಅವರಿಗೆ ಕರಣಕಳೇಬರಗಳನ್ನು ದಯಪಾಲಿಸಿ, ಕಾಪಾಡಬೇಕೆಂದು ಸಂಕಲ್ಪಿಸಿದನು. ನಾರಾಯಣನೆಂದರೆ, ಜಲವೇ ಸ್ಥಾನವಾಗಿ ಉಳ್ಳವನು, ಅಥವ ಜ್ಞಾನವೇ ಸ್ಥಾನವಾಗಿ ಉಳ್ಳವನು, ಎನ್ನಿಸಿಕೊಳ್ಳುವನು, ಅಥವಾ ಬ್ರಹ್ಮನಿಗೆ ವಾಸಸ್ಥಾನವಾದ ಭಗವಂತನ ನಾಭೀಕಮಲವು, ಅಥವ ಚರಾಚರಗಳಿಗೆಲ್ಲಾ ಅಂತರ್ಯಾಮಿಯಾದವನು, ಎನ್ನುವರು ಇಂತಹ ಪರಬ್ರಹ್ಮನಾದ ಶ್ರೀಮನ್ನಾರಾಯಣನು ಭೂದೇವಿಯನ್ನು ನೀರಿನಮೇಲಿರಿಸಿ, ಭೂಮಿಯನ್ನು ಒಂದೇ ಸಮನಾಗಿ ಮಾಡಿ, ಕುಲಾಚಲಗಳನ್ನು ಸ್ಥಾಪಿಸಿ, ಪ್ರಳಯಕಾಲದಲ್ಲಿ ನಾಶವಾಗಿದ್ದ ಭೂರಾದಿಲೋಕಗಳನ್ನು, ಸ್ಥಾವರಜಂಗಮಾತ್ಮಕವಾದ ಜಗತ್ತನ್ನೂ ಸ್ವಸಂಕಲ್ಪಮಾತ್ರದಿಂದಲೇ ಸೃಷ್ಟಿಸಿದನು ಆಗ ಪರಮಾತ್ಮನ ಸಂಕಲ್ಪದಿಂದ ತ್ರಿಗುಣಾತ್ಮಕವಾದ ಪ್ರಕೃತಿಯಿಂದ ಮಹತ್ತೆಂಬ ತತ್ವವೂ, ತರುವಾಯ ಅಹಂಕಾರ ತತ್ವವೂ, ಅದರಿಂದ ಪಂಚೇಂದ್ರಿಯಗಳೂ, ಆಕಾಶಾದಿ ಭೂತತನ್ಮಾತ್ರಗಳೂ, ಇವುಗಳಿಂದ ಪಂಚಭೂತಗಳೂ, ಉತ್ಪನ್ನವಾದುವು. ತರುವಾಯ ಭಗವಂತನ ಕಾಲಶಕ್ತಿಯಿಂದ ಇವು ಪ್ರೇರಿತಗಳಾಗಿ ಪಂಚೀಕರಣ ಕ್ರಮವನ್ನು ಅನುಸರಿಸಿ ಒಂದಕ್ಕೊಂದು ಸಂಯೋಗವನ್ನು ಹೊಂದಿ, ಸ್ಥೂಲಸೂಕ್ಷ್ಮಭೇದಗಳಿಂದ, ಕಾಲಕರ್ಮ ಸ್ವಭಾವಗಳನ್ನನುಸರಿಸಿ, ವಿಚಿತ್ರಪರಿಣಾಮಗಳನ್ನು ಹೊಂದಿ ಪ್ರಪಂಚಾತ್ಮಕಗಳಾಗಿ ಪರಿಣಮಿಸಿದವು. ವಿರಾಟ್ಸ್ವರೂ

ಷನೆನಿಸಿದ ಶ್ರೀಮನ್ನಾರಾಯಣನು, ಆ ಅಂಡಮಧ್ಯದಲ್ಲಿ ವೇದಗಳಿಂದ ಸ್ತೋತ್ರಮಾಡಲ್ಪಡುವವನಾಗಿ ಯೋಗನಿದ್ರೆಯಂಗೈದನು. ನಂತರ ಕ್ಷೀರಾಬ್ಧಿಶಾಯಿಯಾದ ಭಗವಂತನ ನಾಭೀಕಮಲದಿಂದ ಚತುರ್ಭುಜಗಳುಳ್ಳ ಚತುರ್ಮುಖ ಬ್ರಹ್ಮನು ಹುಟ್ಟಿದನು ಪುರುಷಕಾರಳಾದ ಶ್ರೀ ಮಹಾಲಕ್ಷ್ಮಿಯು ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಹೊಂದುತಲಿರುವ ಈ ಬಾಲಕನನ್ನು ನೋಡಿ, ಆನಂದ ಭರಿತಳಾಗಿ, ತನ್ನ ಪ್ರಿಯವಲ್ಲಭನನ್ನು ಕುರಿತು, ಈ ತರುಣನಿಗೆ ವೇದೋಪದೇಶವನ್ನು ಮಾಡಲು ಪ್ರಾರ್ಥಿಸಲು, ಅದರಂತೆ ವಿರಂಚಿಗೆ ವೇದಕ್ಕೆ ಆದಿಯಾದ ಪ್ರಣವವನ್ನೂ, ವೇದಗಳನ್ನೂ, ವೇದಾಂಗಗಳನ್ನೂ ಮತ್ತು ಅಷ್ಟಾಕ್ಷರ ಮಹಾಮಂತ್ರವನ್ನೂ, ಸಾಕ್ಷಾತ್ತಾಗಿ ಉಪದೇಶಿಸಿದನು ಕಮಲಾಸನನು ಇವುಗಳನ್ನು ಪಠಿಸಿ, ಮನನಮಾಡಿ, ಜಪಿಸಿ, ನಿಖಿಲಜಗತ್ಸೃಷ್ಟಿ ಸ್ಥಿತಿಲಯಕಾರಣನಾದ ಶ್ರೀಮನ್ನಾರಾಯಣನೇ ತನಗ ಪರಮಾಚಾರ್ಯನೆಂದೂ ಮತ್ತು ಪರಮಪುರುಷನೆಂದೂ ತನ್ನ ದಿವ್ಯ ಜ್ಞಾನದಿಂದ ಅರಿತವನಾದನು. ಸ್ವಾಮಿಯ ಅನಂತ ಕಲ್ಯಾಣಗುಣ ಮಹಿಮೆಯನ್ನು ಈ ಅಷ್ಟಾಕ್ಷರ ಮಹಾಮಂತ್ರದ ಜಪದಿಂದ ತಿಳಿದು, ತನ್ನಲ್ಲಿ ಅಂತರ್ಯಾಮಿಯಾಗಿದ್ದುಕೊಂಡು ಪ್ರೇರಿಸುವಂತೆ, ಅವನ ಅಪ್ಪಣೆಯಿಂದ ಸ್ಥಾವರ ಜಂಗಮಾತ್ಮಕವಾದ ಸಮಸ್ತ ಪ್ರಪಂಚವನ್ನೂ, ಆ ದಿವ್ಯ ಆದಿದಂಪತಿಗಳ ಅನುಗ್ರಹಬಲದಿಂದಲೇ ಜೀವರಾಶಿಗಳ ಕರ್ಮಾನುಸಾರವಾಗಿ, ದೇವ, ತಿರ್ಯಙ್ಮನುಷ್ಯ, ಸ್ಥಾವರಗಳೆಂಬ, ಚತುರ್ವಿಧವಾದ ಪ್ರಾಣಿವರ್ಗವನ್ನೂ, ವ್ಯಷ್ಟಿಯಾಗಿ, ಸೃಷ್ಟಿಸಿ, ಲೀಲಾವಿಭೂತಿಯಾದ ಈ ಪ್ರಪಂಚವನ್ನು, ವಿಸ್ತರಿಸಿದನು

ಹೀಗೆ ಇರುತ್ತಿರಲು ಬ್ರಹ್ಮನು, ಪರವ್ಯೂಹವಿಭವಾಂತರ್ಯಾಮ್ಯರ್ಚಾವತಾರಗಳೆಂಬ ಪಂಚಾವಸ್ಥೆಗಳಲ್ಲಿ ಅರ್ಚಾರೂಪಿಯಾದ ಶ್ರೀಮನ್ನಾರಾಯಣನನ್ನು ತಾನು ಪೂಜಿಸಬೇಕೆಂದು, ಆಶಾಯುಕ್ತನಾಗಿ ಮನಸ್ಸಿನಲ್ಲಿ ಯೋಚಿಸಿ ಅಷ್ಟಾಕ್ಷರಾನುಸಂಧಾನ ಪೂರ್ವಕವಾಗಿ ಭಕ್ತಿಯಿಂದ ಪರಮಪುರುಷನ ದಿವ್ಯ ಸಾನ್ನಿಧ್ಯವನ್ನು ಅಪೇಕ್ಷಿಸಿ, ಅವನ ಪಾದಾರ

ವಿಂದಗಳನ್ನು ಧ್ಯಾನಿಸುತ್ತ, ತಪಸ್ಸುಮಾಡಿದನು ಅವನ ಸ್ತೋತ್ರ ದಿಂದ ಪರಮಾನಂದವಂ ಪಡೆದು ಕ್ಷೀರಾಬ್ಧಿಶಾಯಿಯೂ, ಲೋಕಶರಣ್ಯನೂ, ಪುಣ್ಯಶ್ಲೋಕನೂ, ಆದ ಶ್ರೀಮನ್ನಾರಾಯಣನು, ದಿವ್ಯಾಲಂಕಾರ ಭೂಷಿತನಾಗಿ, ಅನಂತ, ಗರುಡ, ವಿಶ್ವಕ್ಸೇನಾದಿಗಳಿಂದ ಪರಿವೃತನಾಗಿ, ವೇದ ಸ್ತುತ್ಯಮಹಿಮನಾಗಿ, ಸತ್ಯಲೋಕದಲ್ಲಿದ್ದ ಚತುರಾನನಿಗೆ ಪ್ರಸನ್ನನಾಗಿ, ಲೋಕಮೋಹಕವಾದ ಸ್ವಸ್ವರೂಪದಿಂದ, ದರ್ಶನವನ್ನಿತ್ತನು ಈ ರೀತಿಯಲ್ಲಿ ನಿತ್ಯಸೂರಿಗಳೇ ಮೊದಲಾದ ಸಕಲಭಕ್ತ ಬೃಂದದೊಡನೆ ಗರುಡಾರೂಢನಾಗಿ ದಯಮಾಡಿದ ಶ್ರೀಶನನ್ನು ಪರಮೇಷ್ಠಿಯು ವಿಮಾನಮಧ್ಯದಲ್ಲಿ ದರ್ಶನವಂ ಮಾಡಿ, ಸ್ತುತಿಗೈದು, ಪರಮಭಕ್ತಿಯಿಂದ ಸಾಷ್ಟಾಂಗನಮಸ್ಕಾರವನ್ನು ಮಾಡಿದನು ಆಗ ದೇವದುಂದುಭಿಗಳು ಭೋರ್ಗರೆದುವು, ಪುಷ್ಪವೃಷ್ಟಿಯು ಕರೆಯಲ್ಪಡುತ್ತಿದ್ದಿತು ತರುವಾಯ ಭಗವಂತನ ಕೈಂಕರ್ಯಪರರು, ಆ ದಿವ್ಯ ವಿಮಾನವನ್ನು ಬ್ರಹ್ಮನ ಮುಂಭಾಗದಲ್ಲಿ ಬಿಜಯಮಾಡಿಸಿ, ಸಂತೋಷಾತಿಶಯದಿಂದ, "ಎಲೈ ಕಮಲಾಸನನೆ! ಸರ್ವಲೋಕಶರಣ್ಯನಾದ ಶ್ರೀಮನ್ನಾರಾಯಣನು ನಿನ್ನ ಭಕ್ತ್ಯತಿಶಯದಿಂದ ನಿನಗೆ ಪ್ರಸನ್ನನಾಗಿ ಇಲ್ಲಿಗೆ ದಯಮಾಡಿಸಿರುವನು ಆದುದರಿಂದ ಈ ಪರಮ ಪುರುಷನನ್ನು ಆರಾಧಿಸಿ ಕೃತಾರ್ಥನಾಗೆಂದು ಅರುಹಿದರು ಇವರ ವಾಕ್ಯವನ್ನು ಶಿರಸಾವಹಿಸಿ, ಅವರ ಪುರುಷಕಾರದಿಂದ ವಿಮಾನಮಧ್ಯದಲ್ಲಿ ಸೌಂದರ್ಯಸಮೃದ್ಧಿಯಿಂದೊಪ್ಪುತಿದ್ದು ಶ್ರೀ ಲಕ್ಷ್ಮಿಯ ಕರಾರವಿಂದದಿಂದ ಪೂಜಿಸಲ್ಪಡುವ ಪಾದವುಳ್ಳವನಾಗಿಯೂ, ಜಾಜ್ವಲ್ಯಮಾನವಾದ ಕಿರೀಟ ಮಕುಟ ಹಾರ ಕೇಯೂರ ನೂಪುರಾದಿ ದಿವ್ಯಾಭರಣಗಳಿಂದಲೂ, ಶಂಖಚಕ್ರಾದ್ಯಾಯುಧಗಳಿಂದಲೂ, ವೈಜಯಂತೀವನಮಾಲೆಗಳಿಂದಲೂ, ಶ್ರೀವತ್ಸವೆಂಬ ಮಚ್ಚೆಯಿಂದಲೂ, ಇಂದಿರಗೆ ಲೀಲಾಗೃಹವಾದ ವಿಶಾಲವಾದ ವಕ್ಷಸ್ಥಳದಿಂದಲೂ, ಶೋಭಿತನಾದ ಚತುರ್ಭುಜನಾದ, ಪೀತಾಂಬರಧಾರಿಯಾದ, ದಿವ್ಯಾಕೃತಿಯುಳ್ಳ ದಿವ್ಯ ಮಂಗಳವಿಗ್ರಹನ ದರ್ಶನವಂ ಮಾಡಿ ಆನಂದಾತಿಶಯದಿಂದ ರೋಮಾಂಚವುಳ್ಳವನಾಗಿ, ಅನೇಕವಿಧದಿಂದ ದೇವೇಶನನ್ನು ಸ್ತುತಿಸಿ ನಮಸ್ಕರಿಸಿ, "ಎಲೈ ಲಕ್ಷ್ಮೀವಲ್ಲಭನೆ! ನಿನಗೆ ಮಂಗಳವಾಗಲಿ, ಶರಣಾಗತ

ರಾದ ನಿನ್ನ ಭಕ್ತರಿಗೆ ಸಕಲ ಇಷ್ಟಾರ್ಥವಂ ಸಲ್ಲಿಸಲು ಕಾಮಧೇನುವಿ ನಂತೆ ನನಗೆ ಪ್ರತ್ಯಕ್ಷನಾದೆ ನೀನು ಸಮಸ್ತ ಲೋಕರಕ್ಷಣಾರ್ಥವಾಗಿ ಮತ್ಸ್ಯಾದ್ಯವತಾರಗಳನ್ನೆತ್ತಿ ದುಷ್ಟನಿಗ್ರಹವಂ ಮಾಡಿ, ಸಕಲೈಶ್ವರ್ಯ ರೂಪಿಣಿಯಾದ ಕಮಲೆಯಿಂದೊಡಗೂಡಿ, ನಮ್ಮೆಲ್ಲರನ್ನು ಕಾಪಾಡುತ್ತ ಲಿರುವೆ ಆದಕಾರಣ ನೀನೇ ನಮ್ಮೆಲ್ಲರಿಗೂ ನಾಥನಾಗಿರುವೆ ಅದು ದರಿಂದ ನಿನ್ನ ಅರ್ಚಾವಿಗ್ರಹಾರಾಧನವು ಸರ್ವಶ್ರೇಷ್ಠವೆಂದು ನಾನರಿ ತವನಾದುದರಿಂದ ನನ್ನ ಅಭೀಷ್ಟವಂ ನೆರವೇರಿಸು " ಎಂದು ವರವಂ ಬೇಡಿದನು ಭಕ್ತಪರಾಧೀನನಾದ ಶ್ರೀಮನ್ನಾರಾಯಣನು ಸಂತೋಷ ಭರಿತನಾಗಿ ವಿಧಾತನ ಪ್ರಾರ್ಥನೆಯಂತೆ ಅರ್ಚಾರೂಪಿಯಾದ ತನ್ನನ್ನು ಸತ್ಯಲೋಕದಲ್ಲಿ ಅನೇಕ ಯುಗಗಳವರೆಗೆ ಆರಾಧಿಸಿ, ನಂತರ ಭೂಲೋಕ ದಲ್ಲಿ ಆರಾಧಿಸಲ್ಪಡಲು ನೇತ್ರಾನಂದಕರವಾದ ತನ್ನ ವಿಗ್ರಹವನ್ನು ಸನ ತ್ಕುಮಾರನಿಗೆ ಕೊಡಬೇಕೆಂದು ಅಪ್ಪಣೆಯಂ ಮಾಡಿದನು ಅದು ಮೊ ದಲು ಚತುರ್ಮುಖನು ಸನತ್ಕುಮಾರನೇ ಮೊದಲಾದ ತನ್ನ ಏಳು ಜನ ಪುತ್ರರೊಡನೆಯೂ ಪುಂಡರೀಕಾಕ್ಷನಾದ ಶ್ರೀಮನ್ನಾರಾಯಣನಿಗೆ ಅನೇಕ ಭೋಗೋಪಕರಣಗಳಿಂದ ಭಕ್ತಿಪುರಸ್ಸರವಾಗಿ, ನಿತ್ಯಾರಾಧನೆಯನ್ನು ಮಾಡುತಲಿದ್ದನು

ಕೆಲವು ಕಾಲಾಂತರ ಬ್ರಹ್ಮನ ಮಾನಸಪುತ್ರನಾದ ಸನತ್ಕುಮಾರನು ಸನಕಸನಂದಾದಿಗಳಿಂದ ಪರಿವೃತನಾಗಿ ಕ್ಷೀರಾಬ್ಧಿಶಾಯಿಯಾದ ಭಗವಂ ತನ ಸೇವೆಯಂ ಮಾಡಿ, ಸತ್ಯಲೋಕಕ್ಕೆ ಹಿಂತಿರುಗಿ ಬಂದು, ವಿನಯಾನ್ವಿ ತನಾಗಿ ಆಚಾರ್ಯನೂ, ತಂದೆಯೂ ಆದ ಪಿತಾಮಹನಿಗೆ ಪ್ರಣಾಮವನ್ನು ಮಾಡಿ, ತನ್ನ ಇಹಪರ ಸಾಧನೆಗಾಗಿ, ಬ್ರಹ್ಮನಿಂದ ಆರಾಧಿಸಲ್ಪಡುತ್ತ ಲಿದ್ದ ದಿವ್ಯಮಂಗಳ ವಿಗ್ರಹನಾದ ತಿರುನಾರಾಯಣನನ್ನು ಭೂಲೋಕದಲ್ಲಿ ಆರಾಧಿಸಲು ದಯಪಾಲಿಸಬೇಕೆಂದು ಬೇಡಿಕೊಂಡನು ಸುಪುತ್ರನ ವಿಜ್ಞಾ ಪನೆಯನ್ನು ಲಾಲಿಸಿ, ಸಂತೋಷಭರಿನಾಗಿ ಒಂದು ಮುಹೂರ್ತಕಾಲ ಚಿಂ ತಿಸಿ ಆ ದಿವ್ಯ ವಿಮಾನವನ್ನು, ಶ್ರಿಯಃಪತಿಯ ಅಪ್ಪಣೆಯಂತೆ, ಸನತ್ಕು ಮಾರನಿಗೆ ಬಿಜಮಾಡಿಸಿಕೊಡಬೇಕೆಂದು ಸಂಕಲ್ಪಿಸಿದನು ಬ್ರಹ್ಮನ ಇಂಗಿ

ತವನ್ನು ತಿಳಿದ ಶ್ರೀಹರಿಯು ಪ್ರತ್ಯಕ್ಷನಾಗಿ, ತನನ್ನು ಸನತ್ಕುಮಾರನಿಗೆ ಬಿಜಮಾಡಿಸಿಕೊಡಬೇಕೆಂದೂ, ತನ್ನ ಹೃದಯೋದ್ಭವವಾದ ಅಪ್ರಾಕೃತ ಶರೀರವುಳ್ಳ ಮತ್ತೊಂದು ವಿಗ್ರಹವನ್ನು ಕೊಡುವುದಾಗಿಯೂ ಸಮಾಧಾನಪಡಿಸಿ, ಹರಿಪ್ರಿಯೆಯ ಕಂಠಾಭರಣದಂತಿರುವ ತನ್ನ ಕೈಗಳಿಂದ ಮತ್ತೊಂದು ದಿವ್ಯಮಂಗಳ ಅರ್ಚಾವಿಗ್ರಹವನ್ನು ನಿರ್ಮಿಸಿ ಬ್ರಹ್ಮನಿಗೆ ಪುನಃ ದಯಪಾಲಿಸಿದನು ಹಿರಣ್ಯಗರ್ಭನು ಶ್ರೀ ಭೂನೀಳಾಯುಕ್ತವಾದ ಆ ದಿವ್ಯ ವಿಗ್ರಹವನ್ನು ಪಿತೃಧನವೆಂದು ಭಾವಿಸಿ, ಅತ್ಯಂತ ಭಕ್ತಿಯುತನಾಗಿ ತನ್ನ ಪತ್ನಿಯೇ ಮುಂತಾದ ಪರಿಜನಗಳೊಡನೆ ಕೂಡಿಕೊಂಡು ಆರಾಧಿಸುತಲಿದ್ದನು ತರುವಾಯ ಭಗವಂತನ ಅಪ್ಪಣೆಯಂತೆ ಮೊದಲಿನ ಅರ್ಚಾವಿಗ್ರಹವನ್ನು ಸನತ್ಕುಮಾರನಿಗೆ ಬಿಜಮಾಡಿಸಿಕೊಟ್ಟು "ಎಲೈ ಸನತ್ಕುಮಾರನೆ! ಸಹ್ಯಪರ್ವತಕ್ಕೆ ಪೂರ್ವದಿಕ್ಕಿನಲ್ಲಿ ಅನೇಕ ಶಿಖರಗಳಿಂದ ಕಂಗೊಳಿಸುವ ಶುದ್ಧ ಸತ್ವಮಯವಾದ ಶ್ವೇತವೃತ್ತಿಕೆಯಿಂದ ಪ್ರಕಾಶಿಸುವ ಅದ್ರಿಯಲ್ಲಿ ಆನಂದಮಯ ವಿಮಾನ ಮಧ್ಯಸ್ಥನಾದ ಶ್ರೀಮನ್ನಾರಾಯಣನನ್ನು ಪ್ರಾಙ್ಮುಖವಾಗಿ ಸ್ಥಾಪಿಸಿ, ಅನೇಕ ಉಪಚಾರಗಳಿಂದ ನಿನ್ನ ಶಿಷ್ಯಮಂಡಲಿಯೊಡನೆ ಆರಾಧಿಸು" ಎಂದನು ಪದ್ಮಸಂಭವದತ್ತವಾದ ಆ ದಿವ್ಯ ವಿಮಾನವನ್ನು ಶ್ರೀ ಸನತ್ಕುಮಾರನು ಸತ್ಯಲೋಕದಿಂದ ವೈಭವದೊಡನೆ ಬಿಜಮಾಡಿಸಿಕೊಂಡು, ಕೈಲಾಸಪರ್ವದ ಮಾರ್ಗವಾಗಿ, ಅಲಕಾಪುರಿಯನ್ನು ಹೊಂದಿ, ಅಲ್ಲಿಂದ ಮೇರುಪರ್ವತದ ಬಳಿಗೈದಿ, ನರನಾರಾಯಣರಿಗೆ ಆಶ್ರಯವಾದ ಉತ್ತರ ಬದರಿಕಾಶ್ರಮವನ್ನು ಸೇರಿದನು ಅಲ್ಲಿ ಆ ದಿವ್ಯ ವಿಮಾನವನ್ನಿಳಿಸಿ ಮೂರು ದಿವಸಗಳ ಪರ್ಯಂತರ ಸಮಸ್ತ ಮುನಿಬೃಂದ ಪರಿವೃತನಾಗಿ ಮಾಧವನನ್ನು ಆರಾಧಿಸಿ, ಅಲ್ಲಿಂದ ಹೊರಟು ಬ್ರಹ್ಮನು ನಿರ್ದೇಶಿಸಿದ ದಕ್ಷಿಣ ದಿಕ್ಕಿನ ಶೇಷಾತ್ಮಕವಾದ ಗಿರಿಯಂ ಕಂಡು, ಸಕಲದೇವತೆಗಳ ಮತ್ತು ಋಷಿಗಳೊಂದಿಗೆ ಆ ಗೋತ್ರದ ಮಧ್ಯದಲ್ಲಿ, ಅನೇಕ ತೀರ್ಥಗಳಿಂದ ಸೇವಿಸಲ್ಪಡುವ ಪ್ರಧಾನ ತೀರ್ಥವನ್ನು ನೋಡಿ, ಇದೇ ಸರ್ವೋತ್ತಮವಾದ ಸ್ಥಾನವೆಂದು ಯೋಚಿಸಿ, ಆ ದಿವ್ಯ ವಿಮಾನವನ್ನು ಪುಷ್ಕರಿಣಿಯ ತೀರ್ಥದಬಳಿ ಪೂರ್ವಾಭಿಮುಖವಾಗಿ ಸ್ಥಾಪಿಸಿದರು

ಈ ವಿಮಾನ ಮಧ್ಯಸ್ಥನಾದ ಶ್ರೀಮನ್ನಾರಾಯಣನು ಭೂಲೋಕಕ್ಕೆ ದಯಮಾಡಿದಾಗ ಒಂದು ಮಹಾ ಪುರುಷ ಪ್ರಮಾಣಯುತನಾಗಲು, ಅವನು ಧರಿಸಿದ್ದ ಶಂಖ, ಚಕ್ರಾದ್ಯಾಯುಧ ವರ್ಗವೂ ಆ ರೂಪಕ್ಕೆ ಅನುಸಾರವಾಯಿತು ಶ್ರೀಶನ ಅಮಾನುಷ ಮಹಿಮೆಯನ್ನು ನೋಡಿ ಅಲ್ಲ ನೆರೆದಿದ್ದ ಋಷಿಪುಂಗವರು ಪರಮಾಶ್ಚರ್ಯಭರಿತರಾಗಿ "ಈ ದಿವಸವೇ ನಮಗೆ ಕಲ್ಯಾಣವು" ಎಂದು ಹೇಳಿ ಕೊಂಡಾಡಿದುದರಿಂದ, ಈ ತೀರ್ಥಕ್ಕೆ ಕಲ್ಯಾಣ ತೀರ್ಥವೆಂದು ಅಂದಿನಿಂದ ಹೆಸರಾಯಿತು ಸನತ್ಕುಮಾರನು ಈ ರೀತಿಯಲ್ಲಿ ತ್ರೈಲೋಕ್ಯ ಮೋಹಕರವಾದ ದಿವ್ಯ ರೂಪವುಳ್ಳ ತಿರುನಾರಾಯಣನನ್ನು ವಿಮಾನದೊಡನೆ ಸ್ಥಾಪಿಸಿ, ಅನನ್ಯ ಪ್ರಯೋಜನಕರವಾದ ಭಕ್ತಿಯಿಂದ ಅವನನ್ನು ಆರಾಧಿಸಿ, ಭಗವಂತನ ಶ್ರೀ ಪಾದತೀರ್ಥವನ್ನು ಸಮಸ್ತರಾದ ದೇವತೆಗಳಿಗೂ, ಋಷಿಗಳಿಗೂ, ಇತರ ಮಾನುಷ ವರ್ಗಕ್ಕೂ ಕೊಟ್ಟು ತಾನೂ ಕೃತಾರ್ಥನಾಗಿ, ಎಲ್ಲರನ್ನೂ ಕೃತಾರ್ಥರನ್ನಾಗಿ ಮಾಡಿದನು ಈ ರೀತಿಯಲ್ಲಿ ಇಂದ್ರಾದಿ ಸಮಸ್ತ ದೇವತೆಗಳೂ, ಋಷಿಗಳೂ, ಅರ್ಚಾವಿಗ್ರಹ ರೂಪಿಯಾದ ಶ್ರೀಮನ್ನಾರಾಯಣನನ್ನು ಯಾದವಾದ್ರಿಯಲ್ಲಿ ಪೂಜಿಸುತ್ತಲೂ, ಸ್ತೋತ್ರ ಮಾಡುತ್ತಲೂ, ಭಕ್ತಿಯಿಂದ ಪುಷ್ಪಫಲಾದಿಗಳನ್ನು ಅರ್ಪಿಸಿ, ನಮಸ್ಕರಿಸುತ್ತಲೂ, ಅನೇಕ ಭೋಗಗಳಿಂದ ಬಹುಕಾಲ ಆರಾಧಿಸುತಲಿದ್ದು, ತಮ್ಮ ಇಹಪರಗಳೆರಡರಲ್ಲಯೂ ಅತ್ಯುತ್ಕೃಷ್ಟವಾದ ಸ್ಥಾನವಂ ಪಡೆದರು, ಎಂದು ದೇವರ್ಷಿಯಾದ ನಾರದನು ವೇದವ್ಯಾಸಾದಿ ಋಷಿಗಳಿಗೆ ತಿಳಿಯಪಡಿಸಿದನು

ಇದನ್ನು ಕೇಳಿ, ಪುನಃ ವ್ಯಾಸಾದಿಗಳು ನಾರದನನ್ನು ಕುರಿತು, ಸತ್ಯಲೋಕದಲ್ಲಿ ಬ್ರಹ್ಮನಿಗೋಸ್ಕರ ಕೊಡಲ್ಪಟ್ಟ ಅರ್ಚಾವಿಗ್ರಹವೂ ಪುನಃ ಭೂಲೋಕಕ್ಕೆ ದಯಮಾಡಿಸಿದ ಸಂಗತಿಯನ್ನು ವಿಶದವಾಗಿ ಹೇಳಬೇಕೆಂದು ಬೇಡಿದರು ನಾರದನು ಉತ್ತರ ಹೇಳುವನು —

ತ್ರೇತಾಯುಗದಲ್ಲಿ ಭಗವದಂಶದಿಂದ ಶ್ರೀರಾಮನು ಇಕ್ಷ್ವಾಕು ವಂಶದಲ್ಲಿ ದಶರಥನಿಗೆ ಪುತ್ರನಾಗಿ ಅವತರಿಸಿ, ಪಿತೃವಾಕ್ಯ ಪರಿಪಾಲನ

ಯಂ ಮಾಡಲು, ಸೀತಾಲಕ್ಷ್ಮಣರೊಡಗೂಡಿ ದಂಡಕಾರಣ್ಯವನ್ನು ಕುರಿತು ಬಂದನು ಇವರು ಅರಣ್ಯದಲ್ಲಿ ಅಲ್ಲಲ್ಲಿ ವಾಸಮಾಡುತಲಿದ್ದ ಮಹರ್ಷಿಗಳನ್ನು ಸೇವಿಸುತ್ತಲೂ, ದುಷ್ಟ ರಾಕ್ಷಸರನ್ನು ಸಂಹರಿಸುತ್ತಲೂ, ಅರಣ್ಯದಲ್ಲಿ ಸಂಚರಿಸುತ್ತಲಿದ್ದರು. ಹೀಗೆ ಪ್ರಯಾಣ ಮಾಡುತ್ತಲಿರುವ ಕಾಲದಲ್ಲಿ ಮಾರ್ಗದಲ್ಲಿ ಸಿಕ್ಕಿದ ನಾರಾಯಣಗಿರಿಗೆ ಬಂದು ಅದರ ಸಾನು ಪ್ರದೇಶದಲ್ಲಿ (ಸೀತಾರಣ್ಯ ಕ್ಷೇತ್ರ) ಒಂದು ಪರ್ಣಶಾಲೆಯನ್ನು ಕಟ್ಟಿಕೊಂಡು ಸ್ವಲ್ಪಕಾಲ ವಾಸಮಾಡಿದರು ಶ್ರೀರಾಮನು ಸೀತಾ ಲಕ್ಷ್ಮಣರೊಡನೆ ಕಲ್ಯಾಣ ತೀರ್ಥದಲ್ಲಿ ಮಿಂದು, ಕಲ್ಯಾಣಗುಣಪರಿಪೂರ್ಣನಾಗಿಯೂ, ಸೌಂದರ್ಯಯುತನಾಗಿಯೂ, ಕನ್ನೈದಿಲೆಯ ಪುಷ್ಪದಂತೆ ವಿಸ್ತಾರವಾದ ನೇತ್ರಗಳುಳ್ಳವನಾಗಿಯೂ, ಲೋಕನಾಯಿಕೆಯಾದ ರಮೆಯಿಂದ ವಾಸಮಾಡಲ್ಪಟ್ಟ ವಿಶಾಲ ವಕ್ಷಸ್ಥಳವುಳ್ಳವನಾಗಿಯೂ, ಶಂಖಚಕ್ರಾದ್ಯಾಯುಧಗಳಿಂದ ಪರಿವೃತನಾಗಿಯೂ ಇರುವ, ಲೋಕಸ್ತುತ್ಯ ಶ್ರೀಮನ್ನಾರಾಯಣನನ್ನು ದರ್ಶನ ಮಾಡಿ, ಕಮಲ ಪುಷ್ಪಗಳಿಂದ ಭಗವಂತನನ್ನು ಆರಾಧಿಸುತ್ತ, ಸ್ವಲ್ಪಕಾಲ ಅಲ್ಲಿ ನೆಲಸಿದ್ದರು ಶ್ರೀರಾಮನ ಇಂಗಿತವನ್ನು ಶ್ರೀಶನು ತಿಳಿದು "ಎಲೈ ದಾಶರಥಿಯೇ! ನೀನು, ದುಷ್ಟರಾಗಿ ಲೋಕಕಂಟಕರಾದ ರಾವಣಾದಿಗಳನ್ನು ಸಂಹರಿಸಿ, ಅಯೋಧ್ಯೆಗೆ ಹಿಂತಿರುಗಿ ಅಯೋನಿಜೆಯಾದ ಸೀತಾ ಸಮೇತನಾಗಿ ಸಾಮ್ರಾಜ್ಯ ಪಟ್ಟಾಭಿಷಿಕ್ತನಾದ ಬಳಿಕ, ನಾನು ನಿನ್ನಲ್ಲಿ ಬೇರೊಂದು ಅಂಶದಿಂದ ಬರುವೆನು" ಎಂದು, ಅಪ್ಪಣೆಯಂ ಮಾಡಿದನು. ಲೋಕಗುರುವಾದ ಶ್ರೀರಾಮನು ಪಿತೃವಾಕ್ಯ ಪರಿಪಾಲಕನಾಗಿ ಹದಿನಾಲ್ಕು ವರುಷಗಳ ವ್ರತವನ್ನು ಮುಗಿಸಿ, ದುಷ್ಟನಿಗ್ರಹ ಶಿಷ್ಟಪರಿಪಾಲನೆಯಂಗೈದು, ಅಯೋಧ್ಯೆಗೆ ಹಿಂತಿರುಗಿ, ಶಾನ್ತ್ರೋಕ್ತವಾಗಿ ಪಟ್ಟಾಭಿಷಿಕ್ತನಾದನು ಯುದ್ಧದಲ್ಲಿ ತನಗೆ ಸಹಾಯಮಾಡಿದ ವಾನರರೇ ಮುಂತಾದವರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಬಹುಮಾನಮಾಡಿ ಅವರವರ ಸ್ಥಾನಗಳಿಗೆ ಕಳುಹಿಸಿಕೊಟ್ಟನು. ಆಕಾಲದಲ್ಲಿ ತನ್ನ ಭಕ್ತನಾದ ವಿಭೀಷಣನ ಪ್ರಾರ್ಥನೆಯಂತೆ, ಇಕ್ಷ್ವಾಕುಕುಲಕ್ರಮಾರಾಧಿತನಾದ ಶ್ರೀರಂಗನಾಥನನ್ನು ತಿರುವಾರಾಧನೆಗೋಸುಗ ಬಿಜಮಾಡಿಸಿಕೊಟ್ಟನು ಈಪ್ರಕಾರ ಲಂಕಾಧೀಶನಾದ ಮತ್ತು

ವಿಷ್ಣುಭಕ್ತರಲ್ಲಿ ಶಿರೋರತ್ನಪ್ರಾಯನಾದ ವಿಭೀಷಣನು ಶ್ರೀರಾಮನಿಂದ ಅನುಗ್ರಹಿಸಿಕೊಡಲ್ಪಟ್ಟ ಶ್ರೀರಂಗನಾಥನನ್ನು ಬಿಜಮಾಡಿಸಿಕೊಂಡು ಸ್ವಸ್ಥಾನವಂ ಕುರಿತು ಪ್ರಯಾಣಮಾಡಲು, ಶ್ರೀರಾಮನು ತನಗೆ ಅರ್ಚಾವಿಗ್ರಹವಿಲ್ಲದ ಖಿನ್ನನಾಗಿರಲು, ಕ್ಷೀರಸಮುದ್ರಶಾಯಿಯಾದ ಭಗವಂತನು ಚತುರ್ಮುಖನನ್ನು ಕುರಿತು "ಲಕ್ಷ್ಮೀ ಸಮೇತನಾಗಿ ನಿನ್ನಿಂದ ಪೂಜಿಸಲ್ಪಡುತಲಿದ್ದ ದಿವ್ಯ ವಿಮಾನಾಂತರ್ಗತನಾದ ಶ್ರೀಮನ್ನಾರಾಯಣನನ್ನು ಕರತಂದು, ಅಯೋಧ್ಯೆಯಲ್ಲಿರುವ ಶ್ರೀರಾಮನಿಗೆ ಒಪ್ಪಿಸು" ಎಂದು, ಅಪ್ಪಣೆಯಂ ಮಾಡಿದನು ಭಗವತ್ಪ್ರೇರಣೆಯಂತೆ ಕಮಲಾಸನನು ದಯಪಾಲಿಸಿದ ಅರ್ಚಾವಿಗ್ರಹವನ್ನು ಶ್ರೀರಾಮನು, ಸೀತಾಲಕ್ಷ್ಮಣ ಭರತಶತ್ರುಘ್ನ ಸಮೇತನಾಗಿ, ತನ್ನ ಅವತಾರಾಂತ್ಯಕಾಲದವರೆಗೂ ಅನೇಕ ಉಪಚಾರಗಳಿಂದಲೂ, ಭಕ್ತಿಯಿಂದಲೂ ಪೂಜಿಸುತ್ತಲಿದ್ದನು ಅಂದಿನಿಂದ ಈ ವಿಗ್ರಹಕ್ಕೆ "ರಾಮಪ್ರಿಯನೆಂದು" ಹೆಸರುಂಟಾಯಿತು ಎಣೆಯಿಲ್ಲದ ತೇಜಸ್ಸುಳ್ಳ ದಾಶರಥಿಯು, ತನ್ನ ಅವತಾರ ಸಮಾಪ್ತಿಯಾಗುವ ಕಾಲದಲ್ಲಿ ತನ್ನಲ್ಲಿದ್ದ ಅರ್ಚಾವಿಗ್ರಹವನ್ನು ವಾನರೋತ್ತಮನಾಗಿಯೂ, ತನಗೆ ಪರಮಭಕ್ತನಾಗಿಯೂ ಇದ್ದ, ಆಂಜನೇಯನ ಬಳಿಯಲ್ಲಿ ಬಿಜಮಾಡಿಕೊಟ್ಟು, ತನ್ನ ಮಗನಾದ ಕುಶಮಹಾರಾಜನಿಗೆ ಒಪ್ಪಿಸಬೇಕೆಂದು ಅಪ್ಪಣೆಯಂ ಮಾಡಿದ್ದನು ಅದರಂತೆ ಶ್ರೀರಾಮನಿಂದ ಅನುಗ್ರಹಿಸಲ್ಪಟ್ಟ ಸಂಸಾರತಾಪನಾಶಕನಾದ ರಾಮಪ್ರಿಯನೆಂಬ ಆ ದಿವ್ಯ ಮಂಗಳ ಅರ್ಚಾವಿಗ್ರಹವನ್ನು ಮಾರುತಿಯು ಕುಶಮಹಾರಾಜನಿಗೆ ಬಿಜಮಾಡಿಸಿಕೊಟ್ಟನು ಕುಶಮಹಾರಾಜನು ಪರಮಪ್ರೀತಿಯಿಂದ ಸ್ವೀಕರಿಸಿ, ತನ್ನ ಜನಕನು ಪೂಜಿಸುತಲಿದ್ದಂತೆ, ಭಕ್ತಿಪೂರ್ವಕವಾಗಿ ಆರಾಧಿಸುತ್ತಿದ್ದನು ಹೀಗಿರುವಾಗ ಭಗವದನುಗ್ರಹದಿಂದ ಕುಶಮಹಾರಾಜನಿಗ ಸರ್ವಲಕ್ಷಣಸಂಪನ್ನೆಯಾದ "ಕನಕಮಾಲಿನಿ" ಎಂಬ ಹೆಣ್ಣು ಶಿಶುವು, ಹುಟ್ಟಿತು ದಂಪತಿಗಳು ಇದನ್ನು ಪ್ರೀತಿಯಿಂದ ಲಾಲಿಸಿ, ಪೋಷಿಸುತಲಿದ್ದರು ಈ ಕನ್ಯೆಯು ಪ್ರಾಪ್ತಯೌವನಳಾದುದಂ ಕಂಡು, ಇವಳಿಗೆ ಅನುರೂಪನಾದ ವರವನ್ನು ಹುಡುಕುತಲಿದ್ದನು ಒಂದು ದಿನ ರಾತ್ರಿಯು ಸ್ವಪ್ನದಲ್ಲಿ ಕುಶನು, ಸೀತಾ ರಾಮ

ಲಕ್ಷ್ಮಣ ಭರತ ಶತ್ರುಘ್ನರನ್ನು ಕಂಡು, ಅವರಿಗೆ ನಮಸ್ಕರಿಸಿದನು. ಅವರು ತಮ್ಮ ಮೊಮ್ಮಗಳಾದ ಕನಕಮಾಲಿನಿಯನ್ನು ಯದುವಂಶೋತ್ಪನ್ನನಾದ ಯದುಶೇಖರನಿಗೆ ಕೊಟ್ಟು ವಿವಾಹಮಾಡೆಂದು ತಿಳಿಸಿದರು. ಸೀತಾದೇವಿಯು ಪುನಃ ಅವನಿಗೆ ಹಿತವನ್ನು ಕೋರಿ ತನ್ನ ಮಗನನ್ನು ಸಾಂತ್ವವಾಕ್ಯಗಳಿಂದ ಸಮಾಧಾನಪಡಿಸಿ ತನ್ನ ಮೊಮ್ಮಗಳು ಪತಿಗೃಹಕ್ಕೆ ಹೋಗುವಾಗ ಅವಳು ಕೇಳುವ ವರವಸ್ತುವನ್ನು ಸ್ತ್ರೀಧನವಾಗಿ ಕೊಡು ಎಂದು, ಹೇಳಿದಳು. ಬೆಳಗಾದಮೇಲೆ ಕುಶನು ಸ್ವಪ್ನದ ವೃತ್ತಾಂತವನ್ನು ರಾಜವರ್ಗದವರಿಗೆ ತಿಳಿಸಿ, ತನ್ನ ಮನೋವ್ಯಥೆಯನ್ನು ನೀಗಿ, ಹರ್ಷಿತನಾಗಿದ್ದನು. ಇತ್ತಲಾಗಿ ವಿವಾಹಸಂಘಟನೆಗೋಸುಗ ನಾರದನು ಯದುಶೇಖರನ ರಾಜಧಾನಿಯಾದ ಮಧುರಾಪಟ್ಟಣಕ್ಕೆ ಹೋಗಿ, ಯದುಶೇಖರನ ತಂದೆಯಾದ ಯಾದವಭೂಷಣನು ಪೂರ್ವದಲ್ಲಿ ನಾರಾಯಣಾದ್ರಿಯಲ್ಲಿ ಅವತರಿಸಿದ್ದ ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಆರಾಧಿಸಿ ಅವನ ಅನುಗ್ರಹದಿಂದ ಸಾರ್ವಭೌಮ ಪದವಿಯನ್ನು ಪಡೆದಿರುವುದನ್ನು ತಿಳಿದು, ಕುಶಮಹಾರಾಜನ ಮಗಳಾದ "ಕನಕಮಾಲಿನಿ" ಎಂಬ ಕನ್ಯೆಯನ್ನು ತನ್ನ ಮಗನಿಗೆ ತಂದುಕೊಳ್ಳಲು ಯಾದವ ಭೂಷಣನಿಗೆ ಸಲಹೆಕೊಟ್ಟು, ವೀಣಾಗಾನದೊಡನೆ ಹಿಂತಿರುಗಿದನು. ಆ ವೇಳೆಗೆ ಸರಿಯಾಗಿ, ಕುಶಮಹಾರಾಜನು ತನ್ನ ಪರಿವಾರದೊಡನೆ ಮಧುರಾಪಟ್ಟಣವಂ ಕುರಿತು ವರಾನ್ವೇಷಣಾರ್ಥವಾಗಿ ಬಂದು, ಯಾದವಭೂಷಣನನ್ನು ನೋಡಿ, ಅವನೊಡನೆ ತನ್ನ ಮಗಳಾದ ಕನಕಮಾಲಿನಿಯನ್ನು ಯದುಶೇಖರನಿಗೆ ವಿವಾಹಮಾಡಿಕೊಡಲು ನಿಷ್ಕರ್ಷಿಸಿ, ಲಗ್ನಪತ್ರಿಕೆಯನ್ನು ಬರಸಿಕೊಂಡು ತನ್ನ ಬಂಧುವರ್ಗದೊಡನೆ ಅಯೋಧ್ಯೆಗೆ ಬಂದನು.

ಧೀಮಂತನಾದ ಆ ಕುಶಮಹಾರಾಜನು ಶುಭ ಲಗ್ನದಲ್ಲಿ ತನ್ನ ಮಗಳಾದ ಕನಕಮಾಲಿನಿಯನ್ನು ಯದುಶೇಖರನಿಗೆ ಕೊಟ್ಟು, ಬಹಳ ಸಂಭ್ರಮದಿಂದ ವಿವಾಹವನ್ನು ನೆರವೇರಿಸಿ ತನ್ನ ಮುದ್ದು ಮಗಳ ಇಷ್ಟದಂತೆಯೂ, ತನ್ನ ಜನನಿಯಾದ ಜಾನಕಿಯ ಅಪ್ಪಣೆಯಂತೆಯೂ, ಅನೇಕ ದಾಸದಾಸಿಯರನ್ನೂ, ನವರತ್ನಗಳನ್ನೂ, ರಥ, ಕುದುರೆ,

ಗೋವ್ರಗಳೇ ಮುಂತಾದುವುಗಳನ್ನೂ, ಭೂಮಿಯನ್ನೂ, ಬಳುವಳಿಯಾಗಿ ಕೊಟ್ಟನು ಯಾವವಭೂಷಣನು ವಿವಾಹಾನಂತರ, ತನ್ನ ಮಗನೊಡನಯೂ, ಸೊಸೆಯೊಡನೆಯೂ ಮತ್ತು ಇತರ ಪರಿವಾರದೊಡನೆಯೂ, ಅಯೋಧ್ಯೆಯಿಂದ ಹೊರಟು ಬಹಳ ವೈಭವದಿಂದ ಶ್ರೀ ರಾಮಪ್ರಿಯನನ್ನು ರತ್ನಮಯವಾದ ಪಲ್ಲಕ್ಕಿಯಲ್ಲಿ ಬಿಜಮಾಡಿಸಿಕೊಂಡು ತನ್ನ ರಾಜಧಾನಿಯಾದ ಮಧುರೆಯನ್ನು ನೇರಿದನು ಇದನ್ನು ನೋಡಿ ಆನಂದಿಸಿದ ಪುರಜನರೇ ಮುಂತಾದವರು, ರಘುವಂಶ ಮತ್ತು ಯದುವಂಶಗಳ ಪ್ರಭಾವವನ್ನು ಕೊಂಡಾಡಿದರು ಯದುಶೇಖರನು ಪತ್ನೀಸಮೇತನಾಗಿ ಇಕ್ಷ್ವಾಕುವಂಶದಿಂದ ಯದುವಂಶಕ್ಕೆ ಕನ್ಯಾಧನವಾಗಿ ಲಬ್ಧನಾದ ಶ್ರೀ ರಾಮಪ್ರಿಯನನ್ನು ಅನೇಕ ಭೋಗೋಪಕರಣಗಳಿಂದಲೂ, ಭಕ್ತಿಯಿಂದಲೂ ಪೂಜಿಸುತಲಿದ್ದು, ಅವನ ಪರಮಾನುಗ್ರಹದಿಂದ ಪುತ್ರಸಂತಾನಾದಿ ಸಮಸ್ತೈಶ್ವರ್ಯಗಳಿಂದ ಪರಿಪೂರ್ಣನಾದನು. ಈ ಕ್ರಮದಿಂದ ಶ್ರೀ ರಾಮಪ್ರಿಯನೆಂಬ ಶ್ರೀಮನ್ನಾರಾಯಣನು ಯದುವಂಶ ಕ್ರಮಾಗತರಾದ ರಾಜರಿಂದ ಕ್ರಮವಾಗಿ ಆರಾಧಿಸಲ್ಪಟ್ಟು, ಯದುವಂಶೋತ್ಪನ್ನನಾದ ವಸುದೇವನ ಅರಮನೆಯಲ್ಲಿ ಆರಾಧಿಸಲ್ಪಡುತ್ತಲಿದ್ದನು ತರುವಾಯ ಯದುವಂಶದಲ್ಲಿ ಭಗವದಂಶದಿಂದ ಸರ್ವಲೋಕಪ್ರಿಯರಾಗಿ ಅವತರಿಸಿದ ಶ್ರೀ ಕೃಷ್ಣಬಲರಾಮರು, ಪಿತೃಧನವಾದ ಶ್ರೀ ರಾಮಪ್ರಿಯನನ್ನು ತಾವೂ ಭಕ್ತಿಪುರಸ್ಸರವಾಗಿ ಪೂಜಿಸುತ್ತಲಿದ್ದರು

ಒಂದು ಸಮಯದಲ್ಲಿ ಪ್ರಹ್ಲಾದ ಪುತ್ರನಾದ ವಿರೋಚನನು ಆಸುರಭಾವದಿಂದ ಕ್ಷೀರಾಬ್ಧಿಯಲ್ಲ ಯೋಗಸಿದ್ರೆಯಂ ಮಾಡುತ್ತಲಿದ್ದ ಭಗವಂತನ ಕಿರೀಟವನ್ನು ಅಪಹರಿಸಿಕೊಂಡು ಪಾತಾಳಲೋಕದಲ್ಲಿ ಹುದಗಿಕೊಂಡಿದ್ದನು ಸ್ವಾಮಿಯ ಅಪ್ಪಣೆಯಂತೆ ಖೇಚರನಾದ ಗರುಡನು ಇವನನ್ನು ಭೂಮಂಡಲದಲ್ಲ ಎಲ್ಲಾ ಕಡೆಯಲ್ಲಿಯೂ ಹುಡುಕಿ, ಕೊನೆಗ ಪಾತಾಳ ಲೋಕದಲ್ಲಿ ಒಂದು ರಹಸ್ಯವಾದ ಗುಹೆಯಲ್ಲಿ ಅಡಗಿರುವುದನ್ನು ನೋಡಿ, ಅವನನ್ನು ಕೊಂದು ಶ್ರೀಶನ ಕಿರೀಟವನ್ನು ಭೂಲೋ

ಕಕ್ಕೆ ತಂದನು ಬೂಮಾರ್ಗದಲ್ಲಿ ಸಂಚರಿಸುತ್ತಿರಲು, ಬೃಂದಾವನದ ಬಳಿ ಸಮವಯಸ್ಕರಾದ ಗೋಪಾಲಕರಿಂದಲೂ, ಗೋ ಸಮೂಹಗಳಿಂದಲೂ ಪರಿವೃತನಾಗಿ ದಿವ್ಯಾಲಂಕಾರ ಭೂಷಿತನಾಗಿದ್ದ ಹರಿಸ್ವರೂಪಿಯಾದ ಶ್ರೀ ಕೃಷ್ಣನನ್ನು ಕಂಡನು ಪರಾಪರ ತತ್ವಗಳನ್ನು ಯಥಾಸ್ಥಿತಿಯಾಗಿ ಬಲ್ಲವನಾದ ವೈನತೇಯನು ಇವನ ಅವತಾರ ರಹಸ್ಯವನ್ನು ತಿಳಿದು ಶ್ರೀಕೃಷ್ಣನ ಕೋರಿಕೆಯಂತೆ ಆ ಕಿರೀಟವನ್ನು ಸಮರ್ಪಿಸಲು ಶ್ರೀಕೃಷ್ಣನು ತಾನು ತನ್ನ ಶಿರಸ್ಸಿನಲ್ಲಿ ಅದನ್ನು ಧರಿಸಲು ಸರಿಹೋಗದುದರಿಂದ ತನ್ನ ಅಂತಃಪುರದಲ್ಲಿ ಆರಾಧಿಸುತಲಿದ್ದ ಶ್ರೀ ರಾಮಪ್ರಿಯನೆಂಬ ಅರ್ಚಾವಿಗ್ರಹದ ಶಿರಸ್ಸಿನಲ್ಲಿ ಧರಿಸಲಾಗಿ, ತೇಜೋಮಯವಾದ ಆ ದೊಡ್ಡ ಕಿರೀಟವು ಶ್ರೀಕೃಷ್ಣನಿಗೆ ಪೂಜ್ಯವಾದ ಆ ದಿವ್ಯ ಮಂಗಳ ವಿಗ್ರಹಕ್ಕೆ ಸರಿಹೋದುದನ್ನು ನೋಡಿ, ಸುಪರ್ಣನು ಪರಮಾಶ್ಚರ್ಯಭರಿತನಾದನು ನಂತರ ವಿಷ್ಣುರಥನು ಭೋಗ ಮೋಕ್ಷ ಪ್ರದನಾಗಿರುವ ಭಗವಂತನಾದ ಶ್ರೀಕೃಷ್ಣನ ಅನುಮತಿಯನ್ನು ಹೊಂದಿ, ಆ ದಿವ್ಯ ಕಿರೀಟದೊಡನೆ ಕ್ಷೀರಾಬ್ಧಿಗ ಹೋಗಿ, ಬೃಂದಾವನದಲ್ಲಿ ನಡೆದ ವೃತ್ತಾಂತವೆಲ್ಲವನ್ನೂ ಶ್ರಿಯಃಪತಿಯಲ್ಲಿ ಬಿನ್ನವಿಸಲು, ಶ್ರೀಶನು ಸುಪ್ರೀತನಾಗಿ, ಸಂತೋಷದಿಂದ, ಭೂಲೋಕದಲ್ಲಿರುವ ತನ್ನ ಸ್ವರೂಪಿಯಾದ ಅರ್ಚಾವಿಗ್ರಹಕ್ಕೋಸಗವೇ ಆ ಕಿರೀಟವನ್ನು ಅರ್ಪಿಸಿ ಬರುವಂತೆ ಅಪ್ಪಣೆ ಮಾಡಿದನು ಅವರಂತೆ ನಾಗಾಂತಕನು ಆ ಕಿರೀಟವನ್ನು ಬೃಂದಾವನಕ್ಕೆ ತಂದು ಸ್ವಾಮಿಯ ನಿಯಮನವನ್ನು ಶ್ರೀಕೃಷ್ಣನಿಗೆ ತಿಳಿಸಿ, ಆ ದಿವ್ಯ ಮುಡಿಯನ್ನು ಯಾದವ ಕುಲಕ್ಕೆ ತಿಲಕ ಪ್ರಾಯನಾದ ವಸುದೇವಾತ್ಮಜನಿಗ ಕೊಡಲಾಗಿ, ಅವನು ಶ್ರೀರಾಮಪ್ರಿಯನ ದಿವ್ಯ ಶಿರಸ್ಸಿನೊಡನೆ ಅದನ್ನು ಸೇರಿಸಿ ಅಲಂಕರಿಸಿದನು. ಆದುದರಿಂದ ಲೋಕದಲ್ಲಿ ಈ ಕಿರೀಟಕ್ಕೆ ವೈರಮುಡಿ [ವಜ್ರದಿಂದ ಮಾಡಿದ ಕಿರೀಟವು] ಎಂದು ಹೆಸರಾಯಿತು

ಹೀಗಿರಲು ಬಲರಾಮನು ಕೊಂಚ ಕಾಲದ ಮೇಲೆ ತೀರ್ಥಯಾತ್ರೆಯಂ ಮಾಡಲು ಹೊರಟು ಅನೇಕ ದಿವ್ಯ ಕ್ಷೇತ್ರಗಳನ್ನೂ, ಪುಣ್ಯ ನದಿಗಳನ್ನೂ ಸೇವಿಸಿ ನಾರಾಯಣಾದ್ರಿಗ ಬಂದು ಅಲ್ಲಿಯ ಪರಮ ಪವಿತ್ರವಾದ

ಕಲ್ಯಾಣ ತೀರ್ಥದಲ್ಲಿ ಸ್ನಾನವಂ ಮಾಡಿ, ಸರ್ವಾತಿಶಯವಾದ ಸೌಂದರ್ಯ ದಿಂದ ಒಪ್ಪುತ್ತಲಿರುವ ಪರಮಪದನಾಥನಾದ ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಸೇವಿಸಿ, ಸಂತೋಷ ಪರವಶನಾಗಿ, ಆ ಭಗವಂತನಲ್ಲಿಯೇ ನಟ್ಟಮನಸ್ಸುಳ್ಳವನಾಗಿರಲು, ಬೃಂದಾವನದಲ್ಲ ತಾನು ಪೂಜಿಸುತ್ತಲಿದ್ದ ಅರ್ಚಾ ವಿಗ್ರಹವು, ಶ್ರೀ ತಿರುನಾರಾಯಣ ವಿಗ್ರಹದಂತೆ ಇದ್ದುದನ್ನು ಕಂಡು, ವಿಸ್ಮಿತನಾದನು. ತರುವಾಯ ಬಲರಾಮನು ಬೃಂದಾವನಕ್ಕೆ ಹಿಂ ತಿರುಗಿ, ಈ ವಿಚಾರವನ್ನು ಶ್ರೀಕೃಷ್ಣನಿಗೆ ಅರುಹಲು, ಯಶೋದಾ ಪುತ್ರನು ನಾರಾಯಣಗಿರಿಗೆ ಹೋಗಿ ಶ್ರೀಮನ್ನಾರಾಯಣನನ್ನು ಸೇವಿಸಲು ಮನಸ್ಸು ಮಾಡಿ, ತನ್ನ ಪರಿವಾರದೊಡನೆಯೂ, ಬಲದೇವನೊಡನೆಯೂ ಕಲೆತು ಶ್ರೀ ರಾಮಪ್ರಿಯನೆಂಬ ವಿಗ್ರಹವನ್ನು ಬಿಜಮಾಡಿಸಿಕೊಂಡು, ಪರಮ ವೈಭ ವದಿಂದ ನಾರಾಯಣಾದ್ರಿಗ ಬಂದರು ಶ್ರೀರಾಮಕೃಷ್ಣರು ರಾಮಪ್ರಿಯ ನನ್ನು ಶ್ರೀಮನ್ನಾರಾಯಣನ ಸನ್ನಿಧಿಯಲ್ಲಿ ಶಾಸ್ತ್ರೋಕ್ತವಾಗಿ ಪ್ರತಿಷ್ಠೆ ಯಂ ಮಾಡಿ, ಏಕರೂಪಗಳಾದ ಉಭಯ ಅರ್ಚಾವಿಗ್ರಹಗಳ ಸಂದರ್ಶನ ದಿಂದ ಸಂತುಷ್ಟ ಚಿತ್ತರಾಗಿ ಆರಾಧಿಸುತ್ತಲಿದ್ದರು ಹೀಗೆ ಕೊಂಚಕಾಲ ಯದುವಂಶದ ರಾಜರು ಈ ಗಿರಿಯಲ್ಲಿ ರಾಜ್ಯಭಾರವಂ ಮಾಡಿ, ಶ್ರೀಶನ ಪಾದಾರವಿಂದವನ್ನು ಸೇವಿಸುತಲಿದ್ದುದರಿಂದ "ನಾರಾಯಣಾದ್ರಿ" ಎಂದೂ "ಯಾದವಗಿರಿ" ಎಂದೂ ಪ್ರಸಿದ್ಧಿಯುಂಟಾಯಿತು

ಇದಾದ ಕೆಲವು ಕಾಲಾನಂತರ ಶ್ರೀಮದ್ವಿಶಿಷ್ಟಾದ್ವೈತ ಮತಸ್ಥಾಪ ಕರಾದ ಶ್ರೀ ರಾಮಾನುಜಾಚಾರ್ಯರವರು ಕ್ರಿ॥ ಶ॥ ೧೧ನೆಯ ಶತಮಾನ ದಲ್ಲಿ ತಮ್ಮ ಮತವನ್ನು ಉತ್ತರ ದೇಶಗಳಲ್ಲಿಯೂ, ಪ್ರಚಾರಗೊಳಿಸಿ ಚೋಳರಾಜನ ಬಾಧೆಯಿಂದ ಶ್ರೀರಂಗವಂ ಬಿಟ್ಟು ದಕ್ಷಿಣ ದೇಶದ ಕಡೆಗ ಅನೇಕ ಶಿಷ್ಯರೊಡನೆ ಬಂದು, ರಾಮನಾಥಪುರ, ನಾಲಗ್ರಾಮ, ತೊಂಡ ನೂರು ಮುಂತಾದ ಸ್ಥಳಗಳಲ್ಲಿ ಅರ್ಚಾರೂಪಿಗ ಮಂಗಳಾಶಾಸನವಂ ಮಾಡಿ, ಹೊಯಿಸಲ ರಾಜನಾದ ವಿಠಲದೇವರಾಜನನ್ನು ಕಾರಣಾಂತರದಿಂದ ವೈಷ್ಣವನನ್ನಾಗಿ ಮಾಡಿ, ಇವನಿಗೆ ವಿಷ್ಣುವರ್ಧನರಾಯನೆಂಬ ಹೆಸರಂ ಕೊಟ್ಟು, ಅವನಿಂದ ಜೀರ್ಣವಾಗಿದ್ದ ಯಾದವಗಿರಿಯ ಶ್ರೀಮನ್ನಾರಾಯ

ಣನ ದೇವಾಲಯವನ್ನೂ, ವಿಮಾನವನ್ನೂ ಸರಿಪಡಿಸಿ, ಅವನಿಗೂ ಇಹಪರ ಸಾಧಕವೂ ಶ್ರೇಯಸ್ಕರವೂ ಆದ ಕೆಲಸವಂ ಅವನಿಂದ ಮಾಡಿಸಿ, ಶ್ರೀ ಸನತ್ಕುಮಾರನಿಂದ ಆರಾಧಿಸಲ್ಪಡುತ್ತಲಿದ್ದ ದಿವ್ಯ ಮಂಗಳ ವಿಗ್ರಹವನ್ನು ಪಾಂಚರಾತ್ರಾಗಮೋಕ್ತ ಪ್ರಕಾರ ೧೨ ವರುಷಗಳ ಕಾಲ, ಕೈಂಕರ್ಯ ಪರರಾಗಿ, ಭಕ್ತಿಯಿಂದ ಆರಾಧಿಸುತ್ತ, ಲೋಕದ ಜನಗಳು ತಮ್ಮ ಹಾಗೆಯೇ ಸತ್ಕರ್ಮನಿರತರಾಗಿ ನಡೆದುಕೊಂಡು ಉತ್ತೀರ್ಣರಾಗಲೆಂದು ಆಚರಿಸುತ್ತಲಿದ್ದರು.

ಹಿಂದೆ ದೆಹಲಿಯಲ್ಲಿ ಆಳುತಲಿದ್ದ ತುರುಷ್ಕ ರಾಜನು ದಂಡೆತ್ತಿ ಬಂದು ಮೈಸೂರು ಸೀಮೆಯ ಅನೇಕ ದೇವಸ್ಥಾನಗಳನ್ನೂ ಕೊಳ್ಳೆ ಹೊಡೆದು ಅಲ್ಲಲ್ಲಿಯ ಅರ್ಚಾವಿಗ್ರಹಗಳನ್ನು ತನ್ನ ರಾಜಧಾನಿಗೆ ಸಾಗಿಸಿಕೊಂಡು ಹೋಗಿದ್ದನು. ಅದರಂತೆ ಯಾದವಾದ್ರಿಯಲ್ಲಿದ್ದ ಅರ್ಚಾ ವಿಗ್ರಹವನ್ನೂ ತೆಗೆದುಕೊಂಡು ಹೋಗಿ ತನ್ನ ಅರಮನೆಯಲ್ಲಿ ಇಟ್ಟುಕೊಂಡಿದ್ದನು. ರಾಮಪ್ರಿಯನೆಂಬ ವಿಗ್ರಹವನ್ನು ಆ ತುರುಷ್ಕರಾಜನ ಮಗಳಾದ ವರನಂದೀ ಎಂಬುವಳು ನೋಡಿ, ಆನಂದಿಸಿ ತನ್ನ ಆಟಕೋಸ್ಕರ ಅಂತಃಪುರಕ್ಕೆ ತೆಗೆದುಕೊಂಡು ಹೋಗಿ, ಅಲ್ಲಿ ಬಹು ಭಕ್ತಿಯಿಂದ ಪೂಜಿಸುತ್ತಲಿದ್ದಳು

ಕೆಲವು ಕಾಲಾನಂತರ ಶ್ರೀ ರಾಮಾನುಜಾಚಾರ್ಯರವರು (ಉಡೈಯವರಃ) ಶ್ರೀ ತಿರುನಾರಾಯಣಸ್ವಾಮಿಗೆ ಬ್ರಹ್ಮೋತ್ಸವವಂ ಮಾಡಲು ಉತ್ಸವವಿಗ್ರಹವು ಇಲ್ಲದಿರುವುದನ್ನು ನೋಡಿ, ಬಹಳ ವ್ಯಾಕುಲಿತರಾಗಿದ್ದರು. ಒಂದು ದಿವಸ ಯತಿವರ್ಯರಿಗೆ ಶ್ರೀಮನ್ನಾರಾಯಣನು ಸ್ವಪ್ನದಲ್ಲಿ ದರ್ಶನವನ್ನಿತ್ತು, ತನ್ನ ಉತ್ಸವವಿಗ್ರಹವು ದೆಹಲಿಯ ರಾಜನ ಅಂತಃಪುರದಲ್ಲಿ ಇರುವುದಾಗಿಯೂ, ಅದನ್ನು ತಂದು ಪುನಃ ದೇವಾಲಯದಲ್ಲಿ ವಿಧ್ಯುಕ್ತವಾಗಿ ಪ್ರತಿಷ್ಠೆಮಾಡಿ ಉತ್ಸವವಂಗೈವುದೆಂದೂ ಆಜ್ಞಾಪಿಸಿದನು. ಅನಂತರ ಶ್ರೀಮದಾಚಾರ್ಯರು ಅನೇಕ ಶಿಷ್ಯರಿಂದಲೂ ಭಗವದ್ಭಕ್ತರಿಂದಲೂ ಒಡಗೂಡಿ ದೆಹಲಿಗೆ ಹೋಗಿ ರಾಜನನ್ನು ಕಂಡು, ತಾವು

ಬಂದ ಉದ್ದೇಶವನ್ನು ಶೃತಪಡಿಸಿದರು. ದೊರೆಯು ಇವರ ಬ್ರಹ್ಮವರ್ಚಸ್ಸಿಗೂ, ಮತ್ತು ಮೇಲ್ಮೆಗೂ ಮೆಚ್ಚಿ ಆನಂದಭರಿತನಾಗಿ, ಇವರನ್ನು ಸತ್ಕರಿಸಿ, ಉಪಚರಿಸಿ, ಇವರ ಇಷ್ಟದಂತೆ ಅರಮನೆಯಲ್ಲಿರುವ ವಿಗ್ರಹಗಳಲ್ಲಿ ತಮಗೆ ಬೇಕಾದುದನ್ನು ತೆಗೆದುಕೊಂಡು ಹೋಗಲು ಅಪ್ಪಣೆಯಂ ಮಾಡಿದನು. ಅದರಂತೆ ಶ್ರೀ ಭಾಷ್ಯಕಾರರು ಹೋಗಿ ನೋಡಲು ತಮಗೆ ಬೇಕಾದ ವಿಗ್ರಹವು ಸಿಕ್ಕದಿರಲು, ಆಗಲೂ ನಿರಾಶರಾಗದೆ ಪುನಃ ದೊರೆಯನ್ನು ಕುರಿತು ತಮಗೆ ಅವಶ್ಯಕವಾದ ವಿಗ್ರಹವನ್ನು ತರಿಸಿಕೊಡಬೇಕೆಂದು ಕೇಳಿಕೊಂಡರು. ಇದನ್ನು ಕೇಳಿ ರಾಜನು "ನಿಮಗೆ ನಿಮ್ಮ ದೇವರಲ್ಲಿ ಅಷ್ಟು ಭಕ್ತಿಯಿದ್ದಲ್ಲಿ ಕರೆದ ಮಾತ್ರಕ್ಕೆ ಅವನು ನಿಮಗೆ ಅಧೀನನಾಗಬೇಕಲ್ಲವೇ ! ಇಲ್ಲದಿದ್ದಲ್ಲಿ ಅವನಿಗೆ "ಭಕ್ತಪರಾಧೀನ" ನೆಂಬ ಬಿರುದೇ ಸಲ್ಲುತಕ್ಕುದಲ್ಲವು. ಆದಕಾರಣ ನಿಮ್ಮ ದೈವವನ್ನು ನೀವು ಕರೆದುಕೊಂಡು ಹೋಗಬಹುದೆಂದು" ಹೇಳಲು, ಆಗ ರಾಮಾನುಜಾಚಾರ್ಯರು ಆರ್ತತ್ರಾಣ ಪಾರಾಯಣನಾದ ಶ್ರೀ ಭಗವಂತನನ್ನು ಸ್ತುತಿಸಿ, ಪ್ರಾರ್ಥಿಸಿ, ಕರೆಯಲು, ಶ್ರೀ ರಾಮಪ್ರಿಯನು ರಾಣಿಯ ಅಂತಃಪುರದಿಂದ ಒಬ್ಬ ಬಾಲಕನಂತೆ ಕುಣಿಯುತ್ತಾ ಯತಿರಾಜರ ಬಳಿಗೆ ಬರಲು, ಅವರು ಶ್ರೀಶನನ್ನು ಎಣೆಯಿಲ್ಲದ ಪ್ರೀತಿಯಿಂದಲೂ, ಬಹಳ ಸಂತೋಷದಿಂದಲೂ ಎತ್ತಿಕೊಂಡು, ಮುದ್ದಾಡಿ "ಎನ್ ಶಲ್ವಪ್ಪಿಳ್ಳೈ" (ನನ್ನ ಸಂಪತ್ಕುಮಾರನು) ಎಂದು ಕರೆದುಕೊಂಡು, ಆನಂದ ಪರವಶರಾದರು ಡಿಲ್ಲೀಶನು ಇದನ್ನು ನೋಡಿ ಆಶ್ಚರ್ಯಭರಿತನಾಗಿ, ಯತೀಂದ್ರರನ್ನು ಸನ್ಮಾನಿಸಿ, ಇವರೊಂದಿಗೆ ಸಮಸ್ತ ಲೋಕವನ್ನು ಭರಿಸತಕ್ಕ ಅರ್ಚಾವಿಗ್ರಹನಾದ ಶ್ರೀ ರಾಮಪ್ರಿಯನನ್ನು ಪಲ್ಲಕ್ಕಿಯಲ್ಲಿ ಬಿಜಮಾಡಿಸಿ, ಬಹಳ ವಿಜೃಂಭಣೆಯೊಡನೆ ಕಳುಹಿಸಿಕೊಟ್ಟನು.. ಇದನ್ನು ನೋಡಿದ ವರನಂದಿಯು ಬಹಳ ದುಃಖಪರವಶಳಾಗಿ ತನ್ನ ಪ್ರಿಯನಾಥನನ್ನು ಅಗಲಿ ಒಂದು ನಿಮಿಷವಾದರೂ ಇರಲಾರೆನೆಂದು ರೋದಿಸಲು, ದೊರೆಯು ತನ್ನ ಮುದ್ದು ಮಗಳನ್ನು ಶ್ರೀ ರಾಮಪ್ರಿಯನೊಡನೆ ಯತಿಶೈಲಕ್ಕೆ ಕಳುಹಿಸಿಕೊಟ್ಟನು. ಇದು ಮೊದಲುಗೊಂಡು ಶ್ರೀ ರಾಮಪ್ರಿಯನಿಗೆ "ಶಲ್ವಪಿಳ್ಳೈ (ಚಲುವರಾಯ

ಸ್ವಾಮಿ) ” ಎಂದು ಹೆಸರು ಖ್ಯಾತಿಗೊಂಡಿತು. ಈಗಲೂ ಭೂಬಿ ನಾಚ್ಚಿಯಾರ್‌ರವರು (ವರನಂದಿ) ಹೊಗರಮ್ಮಗುಡಿ ಎಂಬ ಸನ್ನಿಧಿಯ ಬಿಲ ದ್ವಾರದ ಮಾರ್ಗವಾಗಿ ಬಂದು ದಿವ್ಯ ಮಂಗಳ ವಿಗ್ರಹನಾದ ಶ್ರೀಶನ ತಿರುವಡಿಯ ಹತ್ತಿರ ನಿಂತು ಸೇವೆಯನ್ನು ಮಾಡುವುದೂ, ವರನಂದಿ ಯವರು ಶ್ರೀಶನ ಪಾದಾರವಿಂದದಲ್ಲಿ ಈಗಲೂ ಅರ್ಚಾರೂಪಿಯಾಗಿ, ಎಲ್ಲರಿಗೂ ಸೇವೆಯನ್ನು ಕೊಡುತ್ತಲಿರುವದೂ, ಲೋಕಪ್ರಸಿದ್ಧವಾಗಿರು ವುದು. ದೆಹಲೀಶನ ಮಗನು ತನ್ನ ಸಹೋದರಿಯ ಭಕ್ತಿವಿಶೇಷವನ್ನೂ, ಯಾದವಗಿರಿಯ ಶ್ರೀಮನ್ನಾರಾಯಣನ ಮಹಿಮೆಯನ್ನೂ, ಅಲ್ಲಿ ಅನೇಕ ಭಕ್ತಬೃಂದದಿಂದ ವಿಧ್ಯುಕ್ತವಾಗಿ ನಡೆದ ಬ್ರಹ್ಮೋತ್ಸವವೇ ಮೊದಲಾ ದುದನ್ನೂ ನೋಡಿ, ಈ ವೈಖರಿಯನ್ನು ತನ್ನ ತಂದೆಗೆ ದೆಹಲಿಯಲ್ಲಿ ತಿಳಿಸಿದನು ದೊರೆಯು ಆಶ್ಚರ್ಯಯುತನಾಗಿ ಯಾದವಗಿರಿಗೆ ತನ್ನ ಪರಿ ವಾರದೊಡನೆ ಬಂದು ಶ್ರೀಶನನ್ನು ಸೇವಿಸಿ, ಆನಂದಪಟ್ಟು ಅನೇಕ ಗ್ರಾಮಗಳನ್ನು ಮಾನ್ಯವಾಗಿ ಕೊಟ್ಟನೆಂದು ಪ್ರತೀತಿಯುಂಟು. ಈ ಸಂಭ ವದಲ್ಲಿ ಎಂಬೆರುಮಾನಾರ್ರವರು ತಮಗೆ ಮನಃಪೂರ್ವಕವಾಗಿ ಸಹಾಯ ಮಾಡಿದ ಪಂಚಮರಿಗೆ ಪೂರ್ಣಾನುಗ್ರಹವಂ ಮಾಡಲು “ತಿರುಕುಲ ತ್ತಾರ್ ” ಎಂಬ ಬಿರುದನ್ನು ದಯಪಾಲಿಸಿ, ಇವರು ಬ್ರಹ್ಮೋತ್ಸವ ಕಾಲದಲ್ಲಿ ರಥೋತ್ಸವ ಮೊದಲು ಮೂರು ದಿವಸಗಳ ಪರ್ಯಂತರ ಶ್ರೀ ಕಲ್ಯಾಣಿ ತೀರ್ಥದಲ್ಲಿ ಸ್ನಾನವನ್ನೂ, ಸನ್ನಿಧಿಯಲ್ಲಿ ಧ್ವಜಸ್ತಂಭ ಪರ್ಯಂ ತರ ಬಂದು ದೇವರಸೇವೆಯನ್ನೂ, ಪ್ರಾಕಾರ ಪ್ರದಕ್ಷಿಣೆಯನ್ನೂ, ತಮ್ಮ ಅರ್ಚಾವಿಗ್ರಹದ ಸೇವೆಯನ್ನೂ ಮಾಡಲು, ಅವಕಾಶವನ್ನಿತ್ತರು ತದಾರಭ್ಯ ಈ ಪದ್ಧತಿಯು ಈ ಕ್ಷೇತ್ರದಲ್ಲಿ ಜರುಗುತ್ತಲಿದೆ. ಆದುದ ರಿಂದ ಈ ಕ್ಷೇತ್ರವು “ಸ್ವರ್ಗವಾವನವು” ಎಂದು, ಪ್ರಸಿದ್ಧಿಹೊಂದಿ ರುವುದು. ತರುವಾಯ ಇಳೈಯಾಳ್ವಾರ್ರವರು, ಸಜ್ಜೆಹಟ್ಟಿಯಲ್ಲಿ ರಾಜ ಕೀಯ ಭಯದಿಂದ ಗೋಪ್ಯವಾಗಿಟ್ಟಿದ್ದ ಉಭಯ ನಾಚ್ಚಿಯಾರ್ ಮೊದಲಾದ ಅರ್ಚಾವಿಗ್ರಹಗಳನ್ನೂ, ಶೂಡಿಕ್ಕೊಡುತ್ತ ನಾಚ್ಚ್ಯಾರ್ರವರ ವಿಗ್ರಹವನ್ನೂ, ಶಲ್ವವಿಗ್ರಹ, ಸ್ನಪನವಿಗ್ರಹವೇ ಮುಂತಾದ ಅರ್ಚಾ ವಿಗ್ರಹಗಳನ್ನೂ ಏರ್ಪಡಿಸಿ, ಅಲ್ಲಿ ನೆಲಸಿದ್ದ ಶ್ರೀಶನ ನಿತ್ಯಾನಪಾಯಿನಿ

ಯಾದ, ಪುರುಷಕಾರಭೂತೆಯಾದ ಶ್ರೀ ಅಮ್ಮನವರ ವಿಗ್ರಹಕ್ಕೆ "ಯದುಗಿರಿ ನಾಯಕಿ (ಸೌಮ್ಯನಾಯಕಿ)" ಎಂದು ನಾಮಕರಣವಂ ಮಾಡಿ, ಶ್ರೀ ಸ್ವಾಮಿಯವರಿಗೆ ಪಾಂಚರಾತ್ರಾಗಮದಲ್ಲಿ ಸಾತ್ವತಸಂಹಿತೆಯಲ್ಲಿ ಉಕ್ತವಾದ ರೀತಿಯಿಂದ, ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ವೈರಮುಡಿ ಉತ್ಸವ, ಬ್ರಹ್ಮೋತ್ಸವವೇ ಮುಂತಾದ ಉತ್ಸವಗಳನ್ನು ಬಹು ವಿಜೃಂಭಣೆಯಿಂದ ನಡೆಯಿಸುತ್ತಲಿದ್ದರು ಈ ರೀತಿಯಲ್ಲಿ ಇವರು ೧೨ ವರುಷಗಳ ಕಾಲ ಈ ಮಹಾಕ್ಷೇತ್ರದಲ್ಲಿ ಇದ್ದುಕೊಂಡಿರಲು, ಚೋಳರಾಜನು ಮೃತನಾದ ವಾರ್ತೆಯಂ ಶ್ರೀರಂಗದಿಂದ ಬಂದಿದ್ದ ಶಿಷ್ಯರಮುಖೇನ ತಿಳಿದು, ಉಭಯ ವೇದಾಂತಪ್ರವರ್ತಕರಾದ ಶ್ರೀ ರಾಮಾನುಜಾಚಾರ್ಯರವರು ಶ್ರೀರಂಗಕ್ಕೆ ಪ್ರಯಾಣಮಾಡಲು ನಿಷ್ಕರ್ಷಿಸಿ, ಶ್ರೀ ತಿರುನಾರಾಯಣನ ಕೈಂಕರ್ಯವೂ ಅವಿಚ್ಛಿನ್ನವಾಗಿ ನಡೆಯಲು ತಮ್ಮ ಕಡೆಯ ಅರ್ಚಕರು ಶ್ರೀರಂಗರಾಜಭಟ್ಟರ ಮೊದಲಾದ ೫೨ ಊಳಿಗವನ್ನು ನೇಮಕಮಾಡಿ, ತಮ್ಮ ಶಿಷ್ಯಮಂಡಲಿಯಲ್ಲಿ ಯೋಗ್ಯರಾದ ೭೪ ಮಂದಿ ಪೀಠಸ್ಥರನ್ನು ಅವರವರ ವಂಶಪಾರಂಪರ್ಯವಾಗಿ ಶ್ರೀಶನ ಸೇವೆಯಲ್ಲಿ ನಿರತರಾಗಿರಲು ಅಪ್ಪಣೆಯಂ ಮಾಡಿದರು ಇದರಂತೆ ಆಯಾಯಾ ಪೀಠಗಳಿಗೆ ಸೇರಿದ ಆಚಾರ್ಯಪುರುಷರು, ಭಾಷ್ಯಕಾರರು ಏರ್ಪಡಿಸಿದಂತೆ ಪ್ರಬಂಧಪಾರಾಯಣ, ವೇದಪಾರಾಯಣವೇ ಮುಂತಾದ ನಿತ್ಯ ಕೈಂಕರ್ಯದಲ್ಲಿ ಆಸಕ್ತರಾಗಿ, ಸ್ವಸಿದ್ಧಾಂತವಾದ ಶ್ರೀಮದ್ವಿಶಿಷ್ಟಾದ್ವೈತ ಮತತತ್ವವನ್ನು ಪ್ರಚಾರಗೊಳಿಸುತಲಿದ್ದರು. ಈ ಮಹನೀಯರ ಚರಿತ್ರೆಯನ್ನು ಬರೆಯಲು ಗ್ರಂಥವಿಸ್ತಾರವಾಗುವದರಿಂದ, ಅತ್ಯಲ್ಪವಾಗಿ ವಿವರಿಸಿದೆ. ಶ್ರೀಶನ ಕೈಂಕರ್ಯ ಪರರಾದವರು ಈಗಿನ ಶ್ರೀ ಪರಕಾಲಮಠದ ಯತಿವರ್ಯರು, ವೇದಾಂತ ದೇಶಿಕರವರು, ಶ್ರೀ ಸೋಮಾಜಿಯಾಂಡಾರ್, ಪಿಳ್ಳೈಲೋಕಾಚಾರ್ಯರು, ಶ್ರೀಮಣವಾಳಮಾಮುನಿಯವರು, ಆದಿವಣ್ ಶಠಕೋಪಸ್ವಾಮಿಗಳು ಗೋಪಾಲದೇಶಿಕರ್, ಶ್ರೀನಿವಾಸಮಹಾದೇಶಿಕರ್ (ಪೆರಿಯಾಂಡವರ್) ಮತ್ತು ಇತರ ಆಚಾರ್ಯಪುರುಷರುಗಳು

ನಂತರ ಶ್ರೀಮದಾಚಾರ್ಯರವರು ತಮ್ಮ ವಿಗ್ರಹವನ್ನು ಭಕ್ತರ ಕೋರಿಕೆಯಂತೆ ಶ್ರೀಶನ ಸನ್ನಿಧಿಯಲ್ಲಿ ಸ್ಥಾಪಿಸಿ, ತಾವು ತಮ್ಮ ಉಳಿದ ಶಿಷ್ಯರೊಡನೆ ಶ್ರೀರಂಗಕ್ಕೆ ಬೇಲೂರು ಮಾರ್ಗವಾಗಿ ಪ್ರಯಾಣ ಬೆಳೆಸಿದರು. ಈ ರೀತಿಯಾಗಿ ಶ್ರೀ ಭಾಷ್ಯಕಾರರ ಶಿಷ್ಯ ಪ್ರಶಿಷ್ಯರು ಈ ಮಹಾಕ್ಷೇತ್ರದಲ್ಲಿ ಅಸಾಧಾರಣ ದಿವ್ಯಮಂಗಳ ವಿಗ್ರಹನಾದ ಶ್ರೀಮನ್ನಾರಾಯಣನ ಕೈಂಕರ್ಯದಲ್ಲಿ ನಿರತರಾದರು. ಲೋಕ ಸಂಗ್ರಹ ಕ್ಕಾಗಿಯೇ ಜನ್ಮವೆತ್ತಿದ ಶ್ರೀ ಭಾಷ್ಯಕಾರರ ವಿಗ್ರಹವನ್ನು "ತಾನು ಉಹಂದತಿರುಮೇನಿ" ಎಂದು ಕರೆಯುವ ರೂಢಿ ಇದೆ.

ಯದುವಂಶದ ರಾಜರೊಲ್ಲಬ್ಬರು ಇಲ್ಲಿಯ ಬೆಟ್ಟಕ್ಕೆ ನಾಲ್ಕು ದಿಕ್ಕಿ ನಲ್ಲಿಯೂ ಕೋಟೆಯನ್ನು ಕಟ್ಟಿಸಿದುದರಿಂದ ಈ ಯಾದವಗಿರಿಯು "ಮೇಲುಕೋಟೆ" ಎಂದೂ ಪ್ರಸಿದ್ಧವಾಯಿತು.

ಈ ದಿವ್ಯ ಕ್ಷೇತ್ರಗಳಲ್ಲಿ ಪಾವನಗಳಾದ ಅನೇಕ ಪುಣ್ಯತೀರ್ಥ ಗಳೂ, ಪರಿಧಾನಶಿಲೆಯೂ, ಅಶ್ವತ್ಥವೃಕ್ಷವೂ, ಪಂಚಭಾಗವತ ಕ್ಷೇತ್ರವೇ ಮೊದಲಾದುವೂ ಇರುತ್ತವೆ. ಪೂರ್ವಕಾಲದಲ್ಲಿ ಭಾಗವತೋತ್ತಮರಾದ ಮಹರ್ಷಿಗಳೂ, ಬ್ರಾಹ್ಮಣಶ್ರೇಷ್ಠರೂ, ಈ ಕ್ಷೇತ್ರದ ತೀರ್ಥದ ಬಳಿ ಅಲ್ಲಲ್ಲಿ ತಪಸ್ಸನ್ನು ಮಾಡಿ, ದೈವಾನುಗ್ರಹವನ್ನು ಪಡೆದು, ಮೋಕ್ಷ ಸಾಮ್ರಾಜ್ಯವನ್ನು ಪಡೆದುದು, ಅನೇಕ ಇತಿಹಾಸಗಳಿಂದ ಕೂಡಿದ ಈ ಕ್ಷೇತ್ರದ ಮಹಾತ್ಮ್ಯದಿಂದ, ವ್ಯಕ್ತವಾಗುವುದು.

ಇಂತಹ ದಿವ್ಯಕ್ಷೇತ್ರ ದರ್ಶನವೂ, ಅಲ್ಲಿಯ ಪುಣ್ಯ ತೀರ್ಥಗಳಲ್ಲಿ ಸ್ನಾನವೂ, ಅಲ್ಲಿ ನೆಲಸಿರುವ ಉತ್ತಮ ಶ್ಲೋಕನಾದ ಶ್ರೀಮನ್ನಾರಾ ಯಣನ ಸೇವೆಯೂ, ಕಲಿಯುಗದಲ್ಲಿ ಇಹಪರ ಸಾಧನೆಗೆ ಪರಮೋಪಾ ಯಗಳಾಗಿವೆ. ಪೂರ್ವಜನ್ಮ ಸುಕೃತ ವಿಶೇಷವಿದ್ದ ಹೊರತು ಮಾನವನಿಗೆ ಶ್ರೀರಂಗ, ಶ್ರೀವೇಂಕಟಾದ್ರಿ, ಶ್ರೀಹಸ್ತಿಶೈಲ, ಮತ್ತು ಯದುಶೈಲ ವೆಂಬ ಈ ಕ್ಷೇತ್ರದರ್ಶನವು ದೊರೆಯಲಾರದು. ಆದುದರಿಂದ ಪ್ರತಿ ಯೊಬ್ಬರೂ ಈ ಕ್ಷೇತ್ರದ ಮಹಾತ್ಮ್ಯವನ್ನೂ ಶ್ರದ್ಧೆಯಿಂದ ಪಠಿಸಿ, ಯದು

ಶೈಲಕ್ಕೆ ಒಂದಾವರ್ತಿಯಾದರೂ ಹೋಗಿ, ಅಷ್ಟಾಕ್ಷರ ಪ್ರತಿಪಾದ್ಯನಾದ ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಸೇವಿಸಿ, ಅರಿಷಡ್ವರ್ಗಗಳನ್ನೂ, ಈಷಣತ್ರಯಗಳನ್ನೂ ನೀಗಿ, ಮನೋವಾಕ್ಕಾಯ ಕರ್ಮಗಳಿಂದ ಮಾಡಿದ ತಮ್ಮ ದುರಿತಗಳನ್ನು ಕಳೆದುಕೊಂಡು, ಕೊನೆಗೆ ಸಂಸಾರ ಬಂಧವನ್ನು ತೊಲಗಿಸಿ, ಶುದ್ಧ ಮನಸ್ಕರಾಗಿ, ಮುಕ್ತಿಮಾರ್ಗವನ್ನನು ಸರಿಸಿ, ಪುನರ್ಜನ್ಮವಿಲ್ಲದ ನಿತ್ಯಮುಕ್ತರು ವಾಸಮಾಡುವ ಶ್ರಿಯಃಪತಿಯ ಪರಮಪದವನ್ನು ಅರ್ಚಿರಾದಿ ಮಾರ್ಗದಿಂದ ಹೊಂದಿ ಶ್ರೀ ವೈಕುಂಠ ನಾಥನ ಸಾಯುಜ್ಯವನ್ನು ಪಡೆಯಬಹದಾಗಿರುತ್ತದೆ

ಶ್ರೀಯಾದವಾಚಲೋತ್ತುಂಗ ಶೃಂಗಶೃಂಗಾರ ಮೂರ್ತಯೇ ।
ರಾಮಾನುಜಾರ್ಯಪುತ್ರಾಯ ಸಂಪತ್ಪುತ್ರಾಯ ಮಂಗಳಂ ॥

ಸ್ವಸ್ತ್ಯಸ್ತು ಸಮಸ್ತ ಸನ್ಮಂಗಳಾನಿಭವಂತು.



॥ ಶ್ರೀರಸ್ತು ॥

ಶ್ರೀ ಕಲ್ಯಾಣೀವಿಲಸದ್ಯದುಗಿರಿ ನಾರಾಯಣಾರ್ಥಿ ಕಲ್ಪತರೋ ।
ಸಂಪತ್ಕುಮಾರಭವತೇ ನಿತ್ಯ ಶ್ರೀರ್ನಿತ್ಯಮಂಗಳಂ ಭೂಯಾತ್ ॥

# ಮೊದಲನೆಯ ಅಧ್ಯಾಯವು.

---

## ೧ ಕ್ಷೇತ್ರ ವರ್ಣನೆಯು.

ಯದುಗಿರಿ ಎಂದು ಕರೆಯಲ್ಪಡುವ ತಿರುನಾರಾಯಣಪುರವು [ಮೇಲುಕೋಟೆಯು] ೧೦೮ ದಿವ್ಯ ದೇಶಗಳಲ್ಲಿ ಒಂದಾಗಿಯೂ, "ಶ್ರೀರಂಗಂ ವೇಂಕಟಾದ್ರಿಶ್ಚ ಹಸ್ತಿಶೈಲಸ್ತ್ವನಂತರಂ । ತತೋನಾರಾಯಣಾದ್ರಿಶ್ಚ ಮಮ ಧಾಮ ಚತುಷ್ಟಯಂ ॥" ಎಂಬ ಭಗವದ್ವಾಕ್ಯದಂತೆ, ಸ್ವಯಂವ್ಯಕ್ತನಾದ ಶ್ರೀಮನ್ನಾರಾಯಣನ ದಿವ್ಯ ಕ್ಷೇತ್ರವಾಗಿಯೂ ಇರುವುದು. ಇದು ದಕ್ಷಿಣ ಇಂಡಿಯಾದಲ್ಲಿ ಮೈಸೂರು ಸೀಮೆಯಲ್ಲಿ ಸುಪ್ರಸಿದ್ಧವಾದ ವೈಷ್ಣವ ದೇವಾಲಯವನ್ನು ಒಳಗೊಂಡದುದಾಗಿ ಇರುತ್ತದೆ. ಈ ಕ್ಷೇತ್ರವು ಮೈಸೂರು ಡಿಸ್ಟ್ರಿಕ್ಟ ಶ್ರೀರಂಗಪಟ್ಟಣದ ತಾಲ್ಲೂಕಿಗೆ ಸೇರಿದ ಒಂದು ಹೋಬಳಿ ಹೆಡ್ ಕ್ವಾರ್ಟರಾಗಿರುತ್ತದೆ ಈ ಗ್ರಾಮವು ಫ್ರೆಂಚ್‌ರಾಕ್ಸ್ ಸ್ಟೇಷನ್ನಿನಿಂದ (ಹಿರೋಡೆ) ೧೪ ಮೈಲಿಗಳ ದೂರದಲ್ಲಿದೆ ಯಾದವಗಿರಿಗೆ ಯಾತ್ರಾರ್ಥಿಗಳಾಗಿ ಹೋಗುವ ಜನಗಳು ಯಾವಾಗಲೂ ತುಂಬಿರೋಣದರಿಂದ ಇದು ಜನಭರಿತವಾಗಿರುತ್ತದೆ ಇದು ಸಮುದ್ರ ಮಟ್ಟಕ್ಕಿಂತ ೩೫೭೯ ಅಡಿ ಎತ್ತರದಲ್ಲಿದೆ, ಮತ್ತು ಒಂದು ಮ್ಯುನಸಿಪಾಲಿಟಿಯಾಗಿ ಏರ್ಪಟ್ಟಿದೆ ಇಲ್ಲಿ ದೇವಸ್ಥಾನದ ಪೇಷ್ಕಾರ್ರವರ ಕಚೇರಿಯೂ, ವೈದ್ಯಶಾಲೆಯೂ, ಸಂಸ್ಕೃತ ಮತ್ತು ಇಂಗ್ಲೀಷು ಪಾಠಶಾಲೆಗಳೂ, ಆಸ್ಪತ್ರೆ ಮೊದಲಾದವುಗಳೂ ಇರುತ್ತವೆ. ಪ್ರಯಾಣಿಕರಿಗೆ ಇಳಿದುಕೊಳ್ಳಲು ಅನುಕೂಲವಾದ ಟ್ರಾವಲರ್ಸ್ ಬಂಗ್ಲೆಯೂ, ಗ್ರಾಮದೊಳಗೆ ವಸತಿಯೂ ಇರುವುದು

ಈ ಗ್ರಾಮವು ಬೆಟ್ಟದ ಮೇಲೆ ಕಟ್ಟಲ್ಪಟ್ಟಿರುವುದರಿಂದ ಆರೋಗ್ಯಕರವಾಗಿಯೂ ಇದೆ. ಇದನ್ನು ಕೃತಯುಗದಲ್ಲಿ ನಾರಾಯಣಾದ್ರಿ ಎಂದೂ, ತ್ರೇತಾಯುಗದಲ್ಲಿ ವೇದಾದ್ರಿ ಎಂದೂ, ದ್ವಾಪರಯುಗದಲ್ಲಿ ಯಾದವಾದ್ರಿ ಎಂದೂ, ಕಲಿಯುಗದಲ್ಲಿ ಯತಿಶೈಲವೆಂದೂ ಕರೆಯುವರು. ಈ ಬೆಟ್ಟದ ಸುತ್ತಲೂ ಇರುವ ಸುಮಾರು ಎರಡು ಯೋಜನಗಳ ವಿಸ್ತೀರ್ಣವುಳ್ಳ ಪ್ರದೇಶವನ್ನು ''ವೈಕುಂಠವರ್ಧನ ಕ್ಷೇತ್ರವು'' ಎಂದು ಕರೆಯುವರು.

## ೨. ಶ್ರೀಶಲ್ವ ತಿರುನಾರಾಯಣ ಸ್ವಾಮಿಯವರ ದೇವಸ್ಥಾನವು.

ಶ್ರೀ ವೈಕುಂಠವರ್ಧನ ಕ್ಷೇತ್ರದ ನಡುವೆ ಇರತಕ್ಕ ಪ್ರದೇಶದಲ್ಲಿ ಶ್ರೀ ತಿರುನಾರಾಯಣ ಸ್ವಾಮಿಯವರ ದೇವಸ್ಥಾನವಿರುತ್ತದೆ. ಇದರಲ್ಲಿ ಶ್ರೀ ತಿರುನಾರಾಯಣ ಸ್ವಾಮಿಯೂ ( ಮೂಲವರು ), ಶ್ರೀ ಶಲ್ವಪಿಳ್ಳೈ ( ಚಲುವರಾಯಸ್ವಾಮಿ-ಸಂಪತ್ಕುಮಾರ ) ರವರೂ ಬಿಜಮಾಡಿಸಿರುತ್ತಾರೆ. ಈ ಎರಡು ವಿಗ್ರಹಗಳೂ ಜಗತ್ಸೃಷ್ಟಿಯ ಕಾಲದಲ್ಲಿ ಬ್ರಹ್ಮನ ಪ್ರಾರ್ಥನೆಯಂತೆ ಸ್ವಯಂವ್ಯಕ್ತ ಅರ್ಚಾರೂಪವಾಗಿ ಕ್ಷೀರಾಬ್ಧಿಶಾಯಿಯಾದ ವಿಷ್ಣುವಿನಿಂದ ದಯಪಾಲಿಸಲ್ಪಟ್ಟವುಗಳಾಗಿರುತ್ತವೆ. ಅರ್ಚಾ ವಿಗ್ರಹನಾದ ತಿರುನಾರಾಯಣಸ್ವಾಮಿಯು ಆನಂದಮಯ ದಿವ್ಯ ವಿಮಾನದೊಡನೆ ಸನತ್ಕುಮಾರನಿಂದ ಭೂಲೋಕಕ್ಕೆ ತರಲ್ಪಟ್ಟು, ಈ ದಿವ್ಯ ಕ್ಷೇತ್ರದಲ್ಲಿ ಪ್ರತಿಷ್ಠಿಸಲ್ಪಟ್ಟನು. ಪುರಾತನವಾದ ಈ ದೇವಾಲಯವನ್ನು ಶ್ರೀ ರಾಮಾನುಜಾಚಾರ್ಯರವರು ಈಚೆಗೆ ಜೀರ್ಣೋದ್ಧಾರ ಮಾಡಿದರು.

ಶ್ರೀ ಶಲ್ವಪಿಳ್ಳೈ (ರಾಮಪ್ರಿಯ) ಎಂಬ ಉತ್ಸವ ವಿಗ್ರಹವು, ಕಮಲಾಸನನಿಂದ ಶ್ರೀರಾಮನಿಗೂ, ಶ್ರೀ ದಾಶರಥಿಯಿಂದ ಯಾದವ ಕುಲದ ರಾಜರಿಗೂ, ಇವರಿಂದ ಶ್ರೀ ರಾಮಕೃಷ್ಣರಿಗೂ, ನಿತ್ಯತಿರುವಾರಾಧನೆಗೆ ಒಪ್ಪಿಸಲ್ಪಟ್ಟಿದ್ದಿತು ಶ್ರೀ ರಾಮಕೃಷ್ಣರು ಈ ಕ್ಷೇತ್ರದಲ್ಲಿ ಈ ಅರ್ಚಾ ವಿಗ್ರಹವನ್ನೂ ಪ್ರತಿಷ್ಠಿಸಿ, ಬಹು ದಿವಸಗಳವರೆಗೆ ಎರಡು ವಿಗ್ರಹಗಳನ್ನೂ ಭಕ್ತಿಯಿಂದ ಪೂಜಿಸುತಲಿದ್ದರು. ಕಾಲಕ್ರಮೇಣ ಶ್ರೀ ರಾಮಾನುಜಾಚಾ

ರ್ಯರವರು ದೆಹಲಿಯಿಂದ ಮೊದಲಿನ ಉತ್ಸವ ವಿಗ್ರಹವನ್ನೂ ಬಿಜಮಾಡಿಸಿ ಕೊಂಡು ಬಂದು ಪುನಃ ತಿರುನಾರಾಯಣನ ಸನ್ನಿಧಿಯಲ್ಲಿ ಶಾಸ್ತ್ರೋಕ್ತ ವಾಗಿ ಪ್ರತಿಷ್ಠಿಸಿ, ಶ್ರೀಯವರುಗಳಿಗೆ ನಿತ್ಯೋತ್ಸವ, ಮಾಸೋತ್ಸವ, ಸಂವತ್ಸರೋತ್ಸವಗಳು ಸಕಾಲದಲ್ಲಿ ಬಹಳ ವಿಜೃಂಭಣೆಯಿಂದ ನಡೆಯು ವಂತೆ ಏರ್ಪಡಿಸಿದರು.

೩. **ಉಪದೇವಾಲಯುಗಳು ಮತ್ತು ಇತರ ಕಟ್ಟಡಗಳು.**

ಶ್ರೀಯವರ ದೇವಸ್ಥಾನದ ಎದುರಿನಲ್ಲಿನ ವಾಹನ ಮಂಟಪದ ಪಕ್ಕ ದಲ್ಲಿ, ಬದರಿನಾರಾಯಣ ಸ್ವಾಮಿಯವರ ದೇವಸ್ಥಾನವೂ, ಬದರಿ ವೃಕ್ಷವೂ, ಇರುತ್ತವೆ ಆದುದರಿಂದ ಈ ಕ್ಷೇತ್ರವನ್ನು ದಕ್ಷಿಣ ಬದರಿಕಾಶ್ರಮ ವೆಂದೂ ಕರೆಯುವರು.

ಶ್ರೀಯವರ ದೇವಸ್ಥಾನದ ಪ್ರಾಕಾರದ ಹೊರಗಿನ ಪಾತಾಳ ಅಂಕ ಣದಲ್ಲಿ,

1 ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಮತ್ತು ಈ ಮಹಾ ಪ್ರಭುಗಳ ನಾಲ್ಕು ಜನ ಪಟ್ಟಮಹಿಷಿಯರುಗಳ ವಿಗ್ರಹಗಳು,

2. ಪಾಕಶಾಲೆಯು,

3. ಬೃಂದಾವನವು,

4 ಶ್ರೀ ಪರಮಪದನಾಥನ ಸನ್ನಿಧಿಯು, ಇದರಲ್ಲಿ 12 ಜನ ಆಳ್ವಾ ರುಗಳೂ, ಅಂಬೆಗಾಲು ಶ್ರೀಕೃಷ್ಣಸ್ವಾಮಿಯೂ, ಬಿಜಮಾಡಿಸಿರುತ್ತಾರೆ.

5. ಶ್ರೀ ಚಕ್ರತ್ತಾಳ್ವಾರ್ (ಸುದರ್ಶನಾಳ್ವಾರ್) ಸನ್ನಿಧಿಯು

6. ಶ್ರೀ ತಿರುಕ್ಕಚ್ಚಿ ನಂಬಿಯವರ ಸನ್ನಿಧಿಯು

7. ಉಗ್ರಾಣವು ಮತ್ತು ಆಂಜನೇಯ ಸ್ವಾಮಿಯ ಸನ್ನಿಧಿಯು

8 (a) ಶ್ರೀ ಯದುಗಿರಿಯಮ್ಮನವರ ಸನ್ನಿಧಿಯು

(b) ಸಂಪಿಗೆಯಾಳ್ವಾರ್, ಆಳವಂದಾರ್, ನಾಥಮುನಿ, ಇವರುಗಳೂ ಬಿಜಮಾಡಿಸಿರುತ್ತಾರೆ

9. ಗಜೇಂದ್ರವರದ

10. ಶ್ರೀಕೂರತ್ತಾಳ್ವಾರ್‌ರವರ ಸನ್ನಿಧಿಯು

11. ಶ್ರೀ ಭಾಷ್ಯಕಾರರ ಸನ್ನಿಧಿಯು

12 ಯಾಗಶಾಲೆಯು ಮತ್ತು ಶ್ರೀಯವರ ಪಾದಗಳು. ಇದರ ಬಳಿ ಇರುವ ಕೊಠಡಿಯಲ್ಲಿ ಶೇಷವಾಹನ, ಹನುಮಂತ ವಾಹನಗಳು ಇರುತ್ತವೆ

13 ಶ್ರೀ ಪಿಳ್ಳೈಲೋಕಾಚಾರ್ಯರ ಸನ್ನಿಧಿಯು

ಶ್ರೀ ತಿರುನಾರಾಯಣ ಸ್ವಾಮಿಯವರ ಒಳಸನ್ನಿಧಿಯ ಪಕ್ಕದಲ್ಲಿಯ ಎಡಭಾಗದಲ್ಲಿ ವಿಷ್ವಕ್ಸೇನರ್, ನಮ್ಮಾಳ್ವಾರ್, ಮತ್ತು ತಿರುಮಂಗೈಯಾಳ್ವಾರ್ರವರೂ, ಬಲಭಾಗದಲ್ಲಿ ಶ್ರೀಯವರ ಬೊಕ್ಕಸವೂ ಇರುವುದು. ಇದರ ಪಕ್ಕದಲ್ಲಿ ಶ್ರೀಯವರ ಆಲಯದ ಗರ್ಭಾಂಕಣದ ಪ್ರದಕ್ಷಿಣೆಯನ್ನು ಮಾಡಲು ಸ್ಥಳವಿರುವುದು. ಇದನ್ನು ಕತ್ತಲೆಯ ಪ್ರದಕ್ಷಿಣೆ ಎಂದೂ ಭೂ ವೈಕುಂಠ ಪ್ರದಕ್ಷಿಣೆ ಎಂದೂ ಕರೆಯುತ್ತಾರೆ. ಇದರ ಬಾಗಿಲನ್ನು ವರುಷಕ್ಕೊಂದಾವರ್ತಿ ವೈರಮುಡಿಯ ಮಹಾಭಿಷೇಕದ ರಾತ್ರಿ ತೆಗೆಯುವರು. ಆಗ ಶ್ರೀ ಚಲುವರಾಯಸ್ವಾಮಿಯವರು ಮಾತ್ರ ಗರ್ಭಗುಡಿಯ ಸುತ್ತಲೂ ಪ್ರದಕ್ಷಿಣೆಯನ್ನು ಮಾಡಿದ ನಂತರ, ಭಕ್ತಾದಿಗಳಿಗೆ ಪ್ರದಕ್ಷಿಣೆಯಂ ಮಾಡಲು ಅವಕಾಶವಿರುತ್ತದೆ. ಇದೇ ರಾತ್ರಿ ಶ್ರೀಯವರು ಹನುಮಂತೋತ್ಸವದಿಂದ ಆಸ್ಥಾನಕ್ಕೆ ಬಿಜಮಾಡಿದ ತರುವಾಯ ಆ ಬಾಗಿಲನ್ನು ಮುಚ್ಚುತ್ತಾರೆ.

ಶ್ರೀಯವರ ಸನ್ನಿಧಿಯು ಗೋಪುರದ ಬಾಗಿಲಿನ ಒಳಗಡೆ, ಬಲಪಾರ್ಶ್ವದಲ್ಲಿ ಶ್ರೀಯವರ ಖಜಾನೆಯು ಇರುವುದು.

ಶ್ರೀಯವರ ದೇವಸ್ಥಾನದ ಹೊರಗಡೆಯ ಬಲಭಾಗದಲ್ಲಿ ಸಂಸ್ಕೃತ ಪಾಠಶಾಲೆಯೂ ಮತ್ತು ಲೈಬ್ರೆರಿಯೂ, ಎಡಪಾರ್ಶ್ವದಲ್ಲಿ ಪೇಷ್ಕಾರ್ರವರ ಕಚೇರಿಯೂ, ಇರುವುದು ಇದರ ಪಕ್ಕದ ಕೊರಡಿಯಲ್ಲಿ ಆನೆಯ ವಾಹನವು ಇರುತ್ತದೆ

## ದೇವಸ್ಥಾನದ ನಾಲ್ಕು ಬೀದಿಗಳಲ್ಲಿಯೂ ಮತ್ತು ಹೊರಗಡೆ ಇರುವ ದೇವಸ್ಥಾನಗಳು.

---

ಆಂಜನೇಯ ಸನ್ನಿಧಿಯು

ಪೇಟಿ ಕೃಷ್ಣದೇವರ ಸನ್ನಿಧಿಯು

ನಮ್ಮಾಳ್ವಾರ್ ಸನ್ನಿಧಿಯು

ತಿರುಮಂಗೈಯಾಳ್ವಾರ್ ಸನ್ನಿಧಿಯು

ಆದಿಕೇಶವನ ಸನ್ನಿಧಿಯು

ಪಟ್ಟಾಭಿರಾಮನ ಸನ್ನಿಧಿಯು

ಬದರಿ ನಾರಾಯಣನ ಸನ್ನಿಧಿಯು

ಕುಲಶೇಖರಾಳ್ವಾರ್ ಸನ್ನಿಧಿಯು

ಶಾಂಡಿಲ್ಯರವರ ಸನ್ನಿಧಿಯು

ಇವುಗಳಲ್ಲದೆ ಇನ್ನೂ ಹನ್ನೆರಡು ಬಿಡಿ ಸನ್ನಿಧಿಗಳು ಅಲ್ಲಲ್ಲಿ ಇರುವುವು.

## ೪. ಶ್ರೀ ಯೋಗಾನೃಸಿಹ್ಮ ಸ್ವಾಮಿಯವರ ದೇವಸ್ಥಾನವು.

ಯಾದವಾದ್ರಿಯ ಪೂರ್ವ ದಿಕ್ಕಿನಲ್ಲಿ ಒಂದು ರಮ್ಯವಾದ ಶಿಖರವಿರುವುದು ಹಿಂದೆ ಪ್ರಹ್ಲಾದನು ಇಲ್ಲಿ ಧ್ಯಾನಾಸಕ್ತನಾಗಿರಲು ಶ್ರೀಮನ್ನಾ

ರಾಯಣನು ಯೋಗಾನೃಸಿಹ್ಮರೂಪಿಯಾಗಿ ಭಕ್ತವತ್ಸಲನಾದ ಪ್ರಹ್ಲಾದ ನಿಗೆ ದರ್ಶನವನ್ನಿತ್ತು, ಅಲ್ಲಿಯೇ ನೆಲಸಿ, ಈಗಲೂ ಭಕ್ತಪರಾಧೀನನಾಗಿ ಯಾತ್ರಾರ್ಥಿಗಳಿಗೂ ದರ್ಶನವನ್ನು ಕೊಡುತ್ತಲಿರುವನು. ಈ ದೇವ ಸ್ಥಾನವು ಶಿಖರದ ಮೇಲೆ ಗೋಪುರಾದಿಗಳಿಂದ ಅಂದವಾಗಿ ಅಲಂಕರಿಸಲ್ಪ ಟ್ಟಿದೆ. ಶ್ರೀಯವರು ಇಲ್ಲಿ ನೆಲಸಿ ಭಕ್ತರನ್ನು ಉಜ್ಜೀವಗೊಳಿಸಲೂ, ತನ್ನ ಸೇವೆಯಿಂದ ಸರ್ವರನ್ನೂ ಕೃತಾರ್ಥರನ್ನಾಗಿ ಮಾಡುತ್ತಲೂ ಇರು ವುದು ಎಲ್ಲರಿಗೂ ವಿದಿತ ವಿಷಯವಾಗಿರುವುದು

ಕಲ್ಯಾಣಿಯ ಪೂರ್ವಭಾಗದ ದ್ವಾರದ ಮೂಲಕ ಗೋತ್ರಾರೋಹಣ ವನ್ನು ಮಾಡುವಾಗ ಬೃಂದಾವನವೂ, ಶ್ರೀಯವರ ಪಾದುಕೆಯೂ, ಆದಿ ಶೇಷನ ಗುಡಿಯೂ, ಮತ್ತು ಆಂಜನೇಯ ದೇವಸ್ಥಾನವೂ ಸಿಕ್ಕುವುದು. ಈ ಬೆಟ್ಟವು ಸುಮಾರು 400 ಮೆಟ್ಟಲುಗಳುಳ್ಳದ್ದಾಗಿರುವುದು.

ಶ್ರೀಯವರ ದೇವಸ್ಥಾನದಿಂದ ಇಳಿದು ಹೋದರೆ ಒಂದು ಬಿಲದ್ವಾ ರವು ಸಿಕ್ಕುವುದು ಇದು ಶ್ರೀಯವರು ನೆಲಸಿರುವ ಅಡಿಪಾರದಲ್ಲಿರು ವುದು. ಈ ಬಿಲದ್ವಾರವನ್ನು ಪ್ರವೇಶಿಸಿ ಬಂದ ಭಕ್ತಾದಿಗಳಿಗೆ ಭಯ, ಶೋಕ, ಮನಸ್ತಾಪಾದಿಗಳು ನಶಿಸಿ ಹೋಗುವುವೆಂದು ಪ್ರತೀತಿಯುಂಟು.

## ೫. ಶ್ರೀ ವರಾಹ ಕ್ಷೇತ್ರವು.

ಶ್ರೀ ನೃಸಿಹ್ಮಾದ್ರಿಯ ಬೆಟ್ಟದ ಕೆಳಭಾಗದಲ್ಲಿರುವ ಶ್ರೀ ಕಲ್ಯಾಣಿ ತೀರ್ಥದ ಪೂರ್ವ ತೀರದಲ್ಲಿ ಈ ಕ್ಷೇತ್ರವಿರುವುದು. ಶ್ರೀ ಮಹಾವಿಷ್ಣುವು ಭೂದೇವಿಯನ್ನು ಸಮುದ್ರದಿಂದ ಮೇಲಕ್ಕೆ ತಂದು, ಶ್ರೀ ಆದಿವರಾಹಮೂ ರ್ತಿಯ ಸ್ವರೂಪವನ್ನು ಧರಿಸಿ, ತನ್ನ ಎಡದ ತೊಡೆಯ ಮೇಲೆ ಭೂದೇವಿ ಯನ್ನು ಕುಳ್ಳಿರಿಸಿಕೊಂಡು, ಶ್ರೀ ವರಾಹ ಚರಮ ಶ್ಲೋಕವನ್ನು ತನ್ನ ವಲ್ಲಭೆಗೆ ಉಪದೇಶವಂ ಮಾಡಿದನು.

## ೬. ಪಂಚ ಭಾಗವತ ಕ್ಷೇತ್ರವು ಮತ್ತು ಜ್ಞಾನಾಶ್ವತ್ಥ ವೃಕ್ಷವು.

ಇದು ಕಲ್ಯಾಣಿಗೆ ಪಶ್ಚಿಮ ತೀರದಲ್ಲಿ ಜ್ಞಾನಾಶ್ವತ್ಥ ವೃಕ್ಷದ ಕೆಳ

ಭಾಗದಲ್ಲಿ ಇರುವುದು. ಈ ಅಶ್ವತ್ಥ ವೃಕ್ಷದ ಅಡಿಯಲ್ಲಿ ಶುಕ, ರುಕ್ಮಾಂಗದ, ಅಂಬರೀಷ, ವಿಕುಕ್ಷಿ ಮತ್ತು ಪುಂಡರೀಕರೆಂಬ ಐದು ಮಂದಿ ಭಾಗವತೋತ್ತಮರು ಅಂತರ್ಮುಖರಾಗಿ ಶ್ರೀಮನ್ನಾರಾಯಣನನ್ನು ಧ್ಯಾನ ಮಾಡಿ, ಮುಕ್ತಿಯಂ ಪಡೆದರೆಂದು ಗೊತ್ತಾಗುವುದು.

## ೭. ಸೀತಾರಣ್ಯ ಕ್ಷೇತ್ರವು.

ಕಲ್ಯಾಣ ತೀರ್ಥದ ದಕ್ಷಿಣ ತೀರದಲ್ಲಿ, ಹಿಂದೆ ವನವಾಸ ಕಾಲದಲ್ಲಿ ಲಕ್ಷ್ಮಣ ರಚಿತವಾದ ಲತಾಗೃಹದಲ್ಲಿ ಶ್ರೀರಾಮನು ಮೈಥಿಲಿಯೊಡನೆ ಇಲ್ಲಿ ಕೆಲವು ಕಾಲ ವಾಸಮಾಡಿಕೊಂಡು, ಲಕ್ಷ್ಮಣ ಸೀತಾ ಸಮೇತನಾಗಿ ಶ್ರೀಶನ ಸೇವೆಯಂ ಮಾಡುತಲಿದ್ದನು.

## ೮. ತಾರ್ಕ್ಷ್ಯ ಕ್ಷೇತ್ರವು.

ಪಂಚ ಭಾಗವತ ಕ್ಷೇತ್ರಕ್ಕೆ ಪಶ್ಚಿಮ ದಿಕ್ಕಿನಲ್ಲಿ ಗರುತ್ಮಂತನು ಶ್ವೇತ ದ್ವೀಪದಿಂದ ತಂದ ಶುದ್ಧ ಮೃತ್ತಿಕೆಯು ಇರುವುದು. ಶ್ರೀ ಯತಿವರ್ಯರ ಕಾಲದಿಂದ ಇದನ್ನು ತಿರುಮಣ್ಣೆಂದು ಕರೆಯುತ್ತಾರೆ.

## ೯ ಪರಿಧಾನ ಶಿಲೆಯು

ಇದು ವೇದಪುಷ್ಕರಿಣಿಯ ತೀರದಲ್ಲಿದೆ. ತುರೀಯಾಶ್ರಮವನ್ನು ಸ್ವೀಕರಿಸುವವರು, ತಮ್ಮ ಕಾಷಾಯವನ್ನು, ಈ ಶಿಲೆಯ ಮೇಲೆ ಇಟ್ಟು, ವಿಧಿಪ್ರಕಾರ ಪರಿಗ್ರಹಿಸುವರು. ಹಿಂದೆ ದತ್ತಾತ್ರೇಯರು ಇದೇ ರೀತಿಯಲ್ಲಿ ಮಾಡಿದುದರಿಂದ, ಈಗಲೂ ಅದೇ ಪದ್ಧತಿಯು ಜರುಗುವುದು.

## ೧೦ ನಯನ ಕ್ಷೇತ್ರವು.

ಇದು ನಾರಾಯಣ ತೀರ್ಥದ ಪೂರ್ವ ದಿಕ್ಕಿನಲ್ಲಿಯ ಗಿರಿಯ ಸಾನು ಪ್ರದೇಶದಲ್ಲಿದೆ. ಇಲ್ಲಿ ಮಹಾ ಭಾಗವತೋತ್ತಮರಾದ ವಿಷ್ಣುಚಿತ್ತರೆಂಬ

ವರು ಘೋರವಾದ ತಪಸ್ಸನ್ನು ಮಾಡಿ, ಮೋಕ್ಷವನ್ನೈದಿದರೆಂದು ಹೇಳು ವರು. ಇಲ್ಲಿ ಶ್ರೀ ಕೇಶವಸ್ವಾಮಿಯವರು ಪ್ರತಿಷ್ಠಿಸಲ್ಪಟ್ಟಿರುವರು.



# ಎರಡನೆಯ ಅಧ್ಯಾಯವು.



## ೧. ಶ್ರೀ ಶಲ್ವ ತಿರುನಾರಾಯಣರ ದರ್ಶನವು.

ಪ್ರತಿ ದಿವಸವೂ ಪ್ರಾತಃಕಾಲ 8 ಘಂಟೆಗೆ ಶ್ರೀ ಕಲ್ಯಾಣಿಯಿಂದ ಶ್ರೀ ಶಲ್ವನಾರಾಯಣರ, ಶ್ರೀ ಅಮ್ಮನವರ ಮತ್ತು ಶ್ರೀರಾಮಾನುಜಾಚಾರ್ಯರ ಸನ್ನಿಧಿಗಳಿಗೆ 12 ಜನ ಅಧ್ಯಾಪಕರು ಆಳವಂದಾರ್ ಸ್ತೋತ್ರವನ್ನು ಪಾರಾಯಣ ಮಾಡಿಕೊಂಡು ಮಂಗಳವಾದ್ಯ ಮತ್ತು ಬಿರುದಾವಳಿಗಳೊಂದಿಗೆ ಗ್ರಾಮ ಪ್ರದಕ್ಷಿಣೆಯಿಂದ ಅಗ್ರೋದಕವನ್ನು ತರುವರು. ನಂತರ ಶ್ರೀ ರಾಮಾನುಜಾಚಾರ್ಯರ ಸನ್ನಿಧಿಯಲ್ಲಿ ಮೊದಲು ತಿರುವಾರಾಧನೆಯೂ, ದೀಪ, ಧೂಪ, ಮಂತ್ರ-ಪುಷ್ಪ, ಅಷ್ಟೋತ್ತರ, ಸಹ ನಡೆದು, ತರುವಾಯ ಶ್ರೀ ತಿರುನಾರಾಯಣ ಸ್ವಾಮಿಗೆ ಸುಪ್ರಭಾತ ಸೇವೆಯಾಗಿ, ಆರತಿ ಮುಂತಾಗಿ ನಡೆಯುವುದು. ಅದರಂತೆಯೇ ಶ್ರೀ ಯದುಗಿರಿಯಮ್ಮನವರ ಸನ್ನಿಧಿಯಲ್ಲಿಯೂ ಕ್ರಮವರಿತು ನಡೆಯುವುದು. ಆಮೇಲೆ ಶ್ರೀಯವರಿಗೆ ಧೌತವಸ್ತ್ರ ಸಮರ್ಪಣೆಗೋಸುಗ, ವಾದ್ಯ ಮತ್ತು ಬಿರುದಾವಳಿಗಳೊಂದಿಗೆ ಆಲಯ ಪ್ರದಕ್ಷಿಣೆಯಿಂದ ಬರುವರು. ಶ್ರೀಯವರಿಗೆ ಧೌತವಸ್ತ್ರ ಸಮರ್ಪಣೆಯಾಗುವ ಕಾಲದಲ್ಲಿ ಅಧ್ಯಾಪಕರು ನಿತ್ಯಾನುಸಂಧಾನ (ಪ್ರಬಂಧ) ಸೇವಾಕಾಲ ಮಾಡುತ್ತಾರೆ. ನಂತರ ತೆರೆಯನ್ನು ತೆಗೆದು ಶ್ರೀಯವರಿಗೆ ತಿರುವಾರಾಧನೆಗೆ ಪ್ರಾರಂಭವಾಗಿ ಅಲಂಕಾರ, ಧೂಪ, ದೀಪ, ಮುಂತಾದುವು ನಡೆದು, ಜಿತಂತಾ ಸ್ತೋತ್ರ, ಅಪರಾಧ ಕ್ಷಮಾಪಣೆಗಳಾಗಿ, ಮಾತ್ರಾದಾನ, ಪುನಃ ದೀಪ, ಧೂಪ, ಕರ್ಪೂರಾರ್ತಿಗಳು ನಡೆದು, ಮಂತ್ರಪುಷ್ಪ, ಸಹಸ್ರ ನಾಮಾರ್ಚನೆ ಆರತಿ ಸಹ ನಡೆದು, ವಿಷ್ವಕ್ಸೇನರಿಗೂ

ಜಯವಿಜಯರಿಗೆ ಸಹ ಆರತಿಯಾಗುವುದು. ಸಹಸ್ರ ನಾಮಾರ್ಚನೆಯ ವೇಳೆ ಆಳವಂದಾರ್ ಸ್ತೋತ್ರ ಮತ್ತು ಮುಕುಂದಮಾಲಾ ಸ್ತೋತ್ರಗಳನ್ನೂ ಸಹ ಸೇವಿಸುವರು ತಿರುವಾರಾಧನೆಯ ವೇಳೆಯಲ್ಲಿ ನಾರಾಯಣೋಪನಿಷತ್ತು, ತೈತ್ತಿರೀಯೋಪನಿಷತ್ತು, ಪುರುಷಸೂಕ್ತ, ಶ್ರೀ ಸೂಕ್ತಗಳನ್ನೂ ಪಠನೆ ಮಾಡುವರು

ಅನಂತರ ಶ್ರೀ ಚಲುವರಾಯ ಸ್ವಾಮಿಯವರ ಸನ್ನಿಧಿಯಲ್ಲಿ ಶ್ರೀಶಲ್ವ ಪಿಳ್ಳೈಯವರಿಗೂ, ಶ್ರೀ ಉಭಯನಾಚ್ಚಿಯಾರಮ್ಮನವರಿಗೂ, ಶ್ರೀಕೃಷ್ಣ ದೇವರಿಗೂ, ಮತ್ತು ಬಲಿಶಲ್ವರಿಗೂ ಅಲಂಕಾರ, ತಿರುವಾರಾಧನೆ ಮುಂತಾದುವು ಮೇಲ್ಕಂಡಂತೆ ನಡೆದು, ಮಂತ್ರ-ಪುಷ್ಪ, ಅಷ್ಟೋತ್ತರಗಳು ಜರುಗುವುವು.

ಇದರಂತೆಯೇ ಶ್ರೀ ಯದುಗಿರಿಯಮ್ಮನವರ ಸನ್ನಿಧಿಯಲ್ಲಿಯೂ ತೆರೆಯ ಒಳಗೆ ತಿರುವಾರಾಧನೆ ಮುಂತಾಗಿ ನಡೆಯುವುದು

ನಂತರ ಶ್ರೀ ತಿರುನಾರಾಯಣ ಸ್ವಾಮಿಯವರ ಆಲಯದಲ್ಲಿ ನಿವೇದನಕ್ಕೆ ಸಿದ್ಧವಾಗಿರುವ ಪೊಂಗಲು, ದಧ್ಯೋದನ, ಮತ್ತು ಶುದ್ಧಾನ್ನವನ್ನು ಎರಡು ಭಾಗ ಮಾಡಿ, ಒಂದು ಭಾಗವನ್ನು ಶ್ರೀ ತಿರುನಾರಾಯಣ ಸ್ವಾಮಿಗೂ, ಶ್ರೀ ಯದುಗಿರಿಯಮ್ಮನವರಿಗೂ ನಿವೇದನವಂ ಮಾಡಿ, ಮತ್ತೊಂದು ಭಾಗವನ್ನು ಶ್ರೀ ಸಂಪತ್ಕುಮಾರರಿಗೆ ನಿವೇದನವನ್ನು ಮಾಡುವರು ನಿವೇದನ ಕಾಲದಲ್ಲಿ ಗೋಪುರದ ಹೊರಬಾಗಿಲಿನ ಬಳಿ ದೊಡ್ಡ ಘಂಟೆಯನ್ನು ಬಾರಿಸುವರು

ಇದೇ ರೀತಿಯಲ್ಲಿ ಶ್ರೀ ಭಾಷ್ಯಕಾರರ ಸನ್ನಿಧಿಯಲ್ಲಿಯೂ ಮತ್ತು ಸುತ್ತು ಗುಡಿಯಲ್ಲಿರುವ ಆಳ್ವಾರ್ ಆಚಾರ್ಯರೇ ಮುಂತಾದವರಿಗೂ ಶ್ರೀಯವರ ಸನ್ನಿಧಿಯ ತೀರ್ಥ, ತುಳಸಿ, ಪ್ರಸಾದಗಳೊಂದಿಗೆ ನಿವೇದನವನ್ನು ಮಾಡುತ್ತಾರೆ. ತರುವಾಯ ಪಾಕಶಾಲೆಯಲ್ಲಿ ನಿತ್ಯ ಹೋಮವು ನಡೆದು, ಶ್ರೀ ಯದುಗಿರಿಯಮ್ಮನವರ ಸನ್ನಿಧಿಯಲ್ಲಿ ಶಾತ್ತುಮುರೈ (ಕಾಂತಾ ಸ್ತೋತ್ರ ಪಠನ), ಗೋಷ್ಠಿಗೆ ತೀರ್ಥ, ಶ್ರೀ ಶಠಾರಿಗಳು ಮರ್ಯಾದಾ

ಕ್ರಮದಿಂದ ನಡೆಯುವುವು. ಹಾಗೆಯೇ ಶ್ರೀ ಯತೀಂದ್ರರ ಸನ್ನಿಧಿಯ ಲ್ಲಿಯೂ ಸಹ ನಡೆದ ನಂತರ ದೇವಸ್ಥಾನದ ಗೋಪುರದ ಬಾಗಿಲಿನ ಎದುರಿನಲ್ಲಿರುವ ಬದರೀ ವೃಕ್ಷಕ್ಕೆ ಸಮಸ್ತ ವಾದ್ಯ, ತಾಳ, ಮೇಳಗಳೊಡನೆ, ಅಲಂಕಾರದೊಂದಿಗೆ ನಿವೇದನ ಮತ್ತು ಮಂಗಳಾರತಿಯು ಸಹ ನಡೆಯುವುದು. ಇದಾದ ಮೇಲೆ ಬಲಿಪ್ರದಾನವಾಗಿ ಶ್ರೀ ತಿರುನಾರಾಯಣ ಸ್ವಾಮಿಯವರಿಗೆ ರಥಾರ್ತಿ, ಗುಂಬಾರ್ತಿ, ಮುಂತಾದ ಆರತಿಗಳು ನಡೆದು, ವೇದ ಮತ್ತು ತಿರುಪ್ಪಾವೈಶಾತ್ತುಮುರೈಯಾಗಿ, ವಿಷ್ವಕ್ಸೇನರು ಆಳ್ವಾರುಗಳೇ ಮುಂತಾದವರಿಗೆ ಮರ್‍ಯಾದಾ ಕ್ರಮದಿಂದ ಗೋಷ್ಠಿಗೆ ಶ್ರೀ ಶಠಾರಿ ನಡೆದು ಅರುಳಪ್ಪಾಡು, ತುಳಸೀ ಪ್ರಸಾದಾದಿಗಳಾಗಿ ಆಚಾರ್ಯಪುರುಷರಿಗೂ, ಶ್ರೀ ರಾಜಒಡೆಯರವರು, ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೂ, ಮತ್ತು ಈಗಿನ ಶ್ರೀ ಮಹಾ ಪ್ರಭುಗಳಿಗೂ (ಶ್ರೀಮನ್ಮಹಾರಾಜರವರು ಪ್ರತ್ಯಕ್ಷದಲ್ಲಿ ದಯಮಾಡಿಸದಿದ್ದರೆ) ದೇವಸ್ಥಾನದ ಅಧಿಕಾರಿಗಳಿಗೂ ಕ್ರಮ ಪ್ರಕಾರ ಮರ್ಯ್ಯಾದೆಗಳೂ, ರಾಜಾಶೀರ್ವಾದವೂ ನಡೆದು, ತೀರ್ಥ ಮರ್ಯ್ಯಾದೆಯೂ ನಡೆಯುವುದು. ನಂತರ ಪಾಕಶಾಲೆಯಿಂದ ವಾದ್ಯ ಮತ್ತು ಬಿರುದಾವಳಿಗಳೊಂದಿಗೆ ಬರುವ ಅಲಂಕಾರದ ತಳಿಗೆಯು ಶ್ರೀಯವರಿಗೂ, ಶ್ರೀ ಅಮ್ಮನವರಿಗೂ, ಮತ್ತು ಶ್ರೀ ರಾಮಾನುಜಾಚಾರ್ಯರವರಿಗೂ ನಿವೇದನ ವಾಗಿ ತರುವಾಯ ಗೋಷ್ಠಿ ವಿನಿಯೋಗವಾಗುವುದು. ಈ ರೀತಿಯಲ್ಲಿ ನಿತ್ಯಕಟ್ಟಳೆಯು ಮುಗಿಯಲು ಮದ್ಯಾಹ್ನ ಸುಮಾರು 1 ಘಂಟೆ ಯಾಗುವುದು. ಈ ಕಾಲದಲ್ಲಿ ಆಗಂತುಕರಾಗಿ ಬರುವ ಯಾತ್ರಿಕರಿಗೂ ದೇವರ ಸೇವೆಯೂ ಆಗುವುದಲ್ಲದೆ, ಅವರ ಕೋರಿಕೆಯಂತೆ ಶ್ರೀಯವರುಗಳಿಗೆ ಅಷ್ಟೋತ್ತರ ಮುಂತಾದ ತುಳಸೀ ಅರ್ಚನೆಗಳನ್ನು ಮಾಡಿಸುವುದಕ್ಕೂ, ನಿವೇದನಾದಿಗಳನ್ನು ಮಾಡಿಸುವುದಕ್ಕೂ ಅವಕಾಶವಿರುವುದು.

ಪ್ರತಿ ಸಾಯಂಕಾಲದಲ್ಲಿ ನಡೆಯತಕ್ಕ ಕೈಂಕರ್ಯಗಳು.—

ಸಾಯಂಕಾಲ 6 ಘಂಟೆಗೆ ಗೋಪುರದ ಬಾಗಿಲಿನಲ್ಲಿ ಸಂಧ್ಯಾರಾಗದ ಓಲಗವಾಗಿ ಶ್ರೀಶರಿಗೆ ದೀವಟಿಗೆಯ ಸಲಾಂ, ನಜರು, ಮುಜರೈ ಆದನಂತರ

ಶ್ರೀ ಯದುಗಿರಿಯಮ್ಮನವರ ಸನ್ನಿಧಿಯಲ್ಲಿಯೂ, ಶ್ರೀ ರಾಮಾನುಜಾಚಾರ್ಯರವರ ಸನ್ನಿಧಿಯಲ್ಲಿಯೂ, ಮೇಲ್ಕಂಡಂತೆ ನಡೆದು, ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರೇ ಮುಂತಾದವರಿಗೂ ದೀವಟಿಗೆಯ ಸಲಾಂ ನಡೆಯುವುದು ತರುವಾಯ ಕೈಂಕರ್ಯಪರರು ಶ್ರೀಯವರ ಮತ್ತು ಶ್ರೀ ಅಮ್ಮನವರ ಸನ್ನಿಧಿಗಳಿಗೆ ವಾದ್ಯದೊಡನೆ ತಿರುಮಾಲೆ, ಪುಷ್ಪಗಳನ್ನು ತೆಗೆದುಕೊಂಡು, ಆಲಯ ಪ್ರದಕ್ಷಿಣೆಯಿಂದ ಆಯಾಯ ಸನ್ನಿಧಿಯಲ್ಲಿ ಇಡುತ್ತಾರೆ. ಆಮೇಲೆ ಹಗಲು ನಡೆಯುವಂತೆ ಆಯಾ ಸನ್ನಿಧಿಗಳಲ್ಲಿ ತಿರುವಾರಾಧನೆ, ನಿವೇದನ, ಮುಂತಾದುದು ಜರುಗಿ ಮಂತ್ರಪುಷ್ಪ, ರಾಜಾಶೀರ್ವಾದಗಳು ನಡೆಯುವುವು. ತರುವಾಯ ಶ್ರೀ ಅಮ್ಮನವರ ಸನ್ನಿಧಿಯ ಬಳಿ ಗೋಷ್ಠಿ ಮರ್ಯಾದಾಕ್ರಮವಾಗಿ ತೀರ್ಥ ಪ್ರಸಾದ ವಿನಿಯೋಗವಾಗುವುದು ಈ ಕ್ರಮದಲ್ಲಿ ನಿತ್ಯಕಟ್ಟಲೆಯೂ ನಡೆದ ತರುವಾಯ, ಕವಾಟ ಬಂಧನವಾಗಲು ರಾತ್ರಿ 10 ಘಂಟೆಯಾಗುವುದು. ಪೂಜಾ ಕಾಲದಲ್ಲಿ ಬರುವ ಭಕ್ತಾದಿಗಳಿಂದ ಶ್ರೀಯವರಿಗೆ ಫಲ ಸಮರ್ಪಣೆ, ಆರತಿ, ದರ್ಶನ ಮುಂತಾದುವು ಯಾವ ಕುಂದುಕೊರತೆಯೂ ಇಲ್ಲದಂತೆ ನಡೆಯುವುವು

೩. **ಪಕ್ಷೋತ್ಸವಾದಿಗಳು:-**

1. **ಶುಕ್ರವಾರದ ಕಟ್ಟಲೆಯು.**—ಪ್ರತಿ ಶುಕ್ರವಾರ ಸಾಯಂಕಾಲ ಶ್ರೀ ತಿರುನಾರಾಯಣನ ಸನ್ನಿಧಿಯಲ್ಲಿ ಸಹಸ್ರನಾಮಾರ್ಚನೆಯಾದ ಮೇಲೆ ಶ್ರೀ ಚಲುವರಾಯಸ್ವಾಮಿಯವರು ಶ್ರೀ ಅಮ್ಮನವರ ಸನ್ನಿಧಿಗೆ ಬಿಜಮಾಡಿ ಅಲ್ಲಿ ತಿರುವಾರಾಧನೆ, ಅಷ್ಟೋತ್ತರವು ನಡೆದು ತಳಿಗೆ ನಿವೇದನವಾಗಿ, ಆರತಿ ಅರುಳಪ್ಪಾಡು ಆದನಂತರ ಮರ್ಯಾದಾಕ್ರಮಪ್ರಕಾರ ತೀರ್ಥ ವಿನಿಯೋಗಗಳು ನಡೆದು, ತರುವಾಯ ಆಸ್ಥಾನಕ್ಕೆ ಬಿಜಮಾಡಿಸುವರು.

2, **ಏಕಾದಶೀ ಕಟ್ಟಲೆಯು.**—ಈ ದಿವಸ ಸಾಯಂಕಾಲ ಶ್ರೀ ತಿರುನಾರಾಯಣ ಸ್ವಾಮಿಯವರಿಗೆ ದೀವಟಿಗೆಯಸಲಾಂ ಆದನಂತರ ಶ್ರೀಯವರಿಗೆ ಪುಳಕಾಪು ಧರಿಸಿ, (ನಾಚ್ಚಾರ್ ತಿರುಮುಳಿ-ತಿರುಮಾಲೆ) ಸೇವಾಕಾಲವಾದ ನಂತರ ತಳಿಗೆ ನಿವೇದನವಾಗಿ, ಆರತಿ, ಸಹಸ್ರನಾಮಾರ್ಚನೆ ಮುಂ

ತವಾಗಿ ನಡೆಯುವುದು. ನಂತರ ಕ್ರಮಪ್ರಕಾರ ಶ್ರೀ ಚಲುವರಾಯಸ್ವಾಮಿಯ ಸನ್ನಿಧಿಯಲ್ಲಿಯೂ, ಶ್ರೀ ಅಮ್ಮನವರ ಸನ್ನಿಧಿಯಲ್ಲಿಯೂ ಅಷ್ಟೋತ್ತರವಾಗಿ, ಅಲಂಕಾರ, ನಿವೇದನ ಮತ್ತು ಬಲಿಪ್ರದಾನವಾದ ಕೂಡಲೆ, ಗೋಷ್ಠಿಗೆ ಮರ್‍ಯಾದಾಕ್ರಮವಾಗಿ ತೀರ್ಥವಿನಿಯೋಗವಾಗುವುದು

3. **ದ್ವಾದಶೀ ಕಟ್ಟಲೆಯು.**— ಹಗಲು-ಶ್ರೀ ತಿರುನಾರಾಯಣನ ಸನ್ನಿಧಿಯಲ್ಲಿ ಸಹಸ್ರನಾಮವಾದ ಕೂಡಲೆ ಶ್ರಿಸ್ತಪನ ವಿಗ್ರಹಕ್ಕೆ ಪಂಚಾಮೃತ ಸ್ನಪನವಾಗಿ, ತಿರುವಾರಾಧನೆ ಮತ್ತು ಆರತಿಯಾಗುವುದು. ಮಧ್ಯಾಹ್ನ 4 ಘಂಟೆಗೆ ಶ್ರೀ ಉತ್ಸವರನ್ನು ವಸಂತೋದ್ಯಾನದ ತೋಟಕ್ಕೆ ಬಿಜಮಾಡಿಸಿ, ಅಲ್ಲಿ ತಿರುವಾರಾಧನೆ, ನಿವೇದನವಾಗಿ, ಅರುಳಪ್ಪಾಡು, ಮರ್‍ಯಾದಾಕ್ರಮವು ಜರುಗಿ, ವಿನಿಯೋಗವಾಗುವುದು ಆಸ್ಥಾನಕ್ಕೆ ಹಿಂತಿರುಗುವ ವೇಳೆಯಲ್ಲಿ ಶ್ರೀಯವರಿಗೆ ವಾರಶಾಲೆಯ ಬಳಿ ಕರಗದ ತಿರುವಾರಾಧನೆ, ನಿವೇದನವಾದ ತರುವಾಯ, ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಸನ್ನಿಧಿಯ ಬಳಿ ಶ್ರೀಯವರಿಗೂ, ಪ್ರಭುಗಳಿಗೂ ಆರತಿಯಾಗಿ, ಸ್ವಾಮಿಯವರು ಸನ್ನಿಧಿಗೆ ಬಿಜಮಾಡಿಸುತ್ತಾರೆ ಆಮೇಲೆ ತಳಿಗೆ ನಿವೇದನವಾಗಿ ಕ್ರಮವರಿತು ವಿನಿಯೋಗ ಮಾಡಲ್ಪಡುವುದು

4 **ಹಸ್ತ ನಕ್ಷತ್ರದ ಕಟ್ಟಲೆಯು.**— ಶ್ರೀ ತಿರುನಾರಾಯಣಸ್ವಾಮಿಯ ಸನ್ನಿಧಿಯಲ್ಲಿ ವಿಶ್ವರೂಪ ಸೇವೆಯಾದ ನಂತರ ಶ್ರೀಯವರಿಗೆ ಪುಳಿಕಾಪು ಧರಿಸಿ, ನಂತರ ತಿರುವಾರಾಧನೆ, ಆರತಿ, ಸಹಸ್ರನಾಮ ಮುಂತಾಗಿ ನಡೆದು, ಶಾತ್ತುಮುರೈ ಕಾಲದಲ್ಲಿ ಮೊದಲು "ಒರುನಾಯಹ" ಎಂಬ ಹತ್ತು ಪಾಶುರವನ್ನು ಹೇಳಿ, ನಂತರ ವೇದಶಾತ್ತುಮುರೈ, ತಿರುವ್ವಾಯ್ಮೊಳಿಶಾತ್ತುಮುರೈಯು ಸಹ ನಡೆಯುವುದು ಮಧ್ಯಾಹ್ನಾತ್ಪರ ದ್ವಾದಶಿಯ ಕಟ್ಟಲೆಯಂತೆ ನಡೆದು, ಶ್ರೀಯವರುಆಸ್ಥಾನಕ್ಕೆ ದಯಮಾಡಿಸುವರು

5 **ಚಿತ್ತಾ ನಕ್ಷತ್ರದ ಕಟ್ಟಲೆಯು.**— ಈ ದಿವಸ ಹಗಲು ಶ್ರೀಚಲುವರಾಯ ಸ್ವಾಮಿಯವರ ಸನ್ನಿಧಿಯಲ್ಲಿ ಅಷ್ಟೋತ್ತರವಾದ ಬಳಿಕ, ಶ್ರೀ

ಶಲ್ವಪ್ಪಿಳ್ಳೆಯವರಿಗೆ ಮಾತ್ರ ಅಭಿಷೇಕವಾಗುವುದು. ನಂತರ ಮಧ್ಯಾಹ್ನ ದಲ್ಲಿ ಬೀದಿಯ ಉತ್ಸವವಾಗಿ ಆಸ್ಥಾನ ಮಂಟಪಕ್ಕೆ ದಯಮಾಡಿ, ಅಲ್ಲಿ ತಿರುವಾರಾಧನೆ, ಆರತಿಯಾದ ನಂತರ ನಿವೇದನವಾಗಿ, ರಾಜಾಶೀರ್ವಾದವು ನಡೆದು ಬಳಿಕ ಅರುಳಪ್ಪಾಡು, ಪರಿವಟ್ಟ, ತೀರ್ಥ ಮರ್ಯಾದಾದಿಗಳು ಕ್ರಮ ವರಿತು ನಡೆನು ಗೋಷ್ಠಿಗೆ ವಿನಿಯೋಗವಾಗುವುದು.

6 **ಆರಿದ್ರಾ ನಕ್ಷತ್ರದ ಕಟ್ಟಳೆಯು**—ಶ್ರೀ ಯದುಗಿರಿಯಮ್ಮವರ ಸನ್ನಿಧಿಯಲ್ಲಿ ಅಷ್ಟೋತ್ತರವಾದ ತರುವಾಯ, ಶ್ರೀ ಭಾಷ್ಯಕಾರರಿಗೆ ಅಭಿ ಷೇಕವಾಗುವುದು. ನಂತರ ತಿರುಪ್ಪಾವೈ ಸೇವಾಕಾಲ ನಡೆದು, ಶಾತ್ತು ಮುರೈಯಾದ ಬಳಿಕ ತೀರ್ಥ ವಿನಿಯೋಗವು, ಮರ್ಯಾದೆಗಳು ಕ್ರಮವಾಗಿ ನಡೆಯುವುವು. ಮಧ್ಯಾಹ್ನ ಶ್ರೀಮದಾಚಾರ್ಯರವರಿಗೆ, ರಾಮಾನುಜ ನೂತ್ತಂದಾದಿಯನ್ನು ಸೇವಿಸುತ್ತ ಉತ್ಸವವಾಗಿ ದೇವಸ್ಥಾನದ ಗೋಪುರದ ಬಾಗಿಲಿನಲ್ಲಿ "ತಿರುವಂದಿಕಾಪ್ಪು" ನಡೆದು, ಆಸ್ಥಾನಕ್ಕೆ ದಯಮಾಡಿ, ತಳಿಗೆ ನಿವೇದನವಾದನಂತರ, ರಾಮಾನುಜ ನೂತ್ತಂದಾದಿ ಶಾತ್ತುಮುರೈ ಯಾಗಿ, ತುಳಸೀ ಪ್ರಸಾದ, ವಿನಿಯೋಗಗಳು ಮರ್ಯಾದಾ ಕ್ರಮವಾಗಿ ಜರು ಗುವುದು.

7 **ಪುಬ್ಬಾ ನಕ್ಷತ್ರದ ಕಟ್ಟಳೆಯು.**—ಆರಿದ್ರಾ ನಕ್ಷತ್ರದ ಕಟ್ಟಳೆ ಯಂತೆ ಶ್ರೀ ಅಮ್ಮನವರಿಗೆ ಅಭಿಷೇಕ ಉತ್ಸವಾದಿಗಳು ನಡೆಯುವುವು

## ೪ ಮಾಸೋತ್ಸವಗಳು

1. ಅಮಾವಾಸ್ಯೆಯ ಕಟ್ಟಳೆಯು.— ದ್ವಾದಶೀ ಕಟ್ಟಳೆಯಂತೆ ಉತ್ಸ ವವು ಜರುಗುವುದು.

2 ಸಂಕ್ರಮಣದ ಕಟ್ಟಳೆಯು — ಮೇಷ, ಕಟಕ ತುಲಾ, ಮಕರ ಸಂ ಕ್ರಮಣಗಳಲ್ಲಿ ಶ್ರೀ ಚಲುವರಾಯ ಸ್ವಾಮಿಯವರಿಗೂ. ಶ್ರೀ ಉಭಯನಾ ಚ್ಚಾರಮ್ಮನವರುಗಳಿಗೂ, ಮತ್ತು ಶ್ರೀ ಭಾಷ್ಯಕಾರರಿಗೂ ಅಭಿಷೇಕವು ನಡೆಯುವುದು. ಮೀನ ಸಂಕ್ರಮಣದ ದಿವಸ ಶ್ರೀ ಅಮ್ಮನವರಿಗೆ ಮಾತ್ರ

ಅಭಿಷೇಕವಾಗುವುದು  ಉಳಿಕೆಯ ಕಲಾಪಗಳು ದ್ವಾದಶೀ ಕಟ್ಟಲೆಯಂತೆ ನಡೆಯುವುದು.

## ೫. ಸಂವತ್ಸರೋತ್ಸವಗಳು (ಹೆಚ್ಚುಕಟ್ಟಲೆಯ ಸೇವೆಗಳು)

ಶ್ರೀ ಶಲ್ವತಿರುನಾರಾಯಣರಿಗೆ ನಡೆಯತಕ್ಕ ಉತ್ಸವಗಳಲ್ಲಿ ಕೆಲವು ಸೌರಮಾನದ ರೀತಿಯಲ್ಲಿಯೂ, ಕೆಲವು ಚಾಂದ್ರಮಾನದ ರೀತಿಯಲ್ಲಿಯೂ ನಡೆಯುತ್ತವೆ.

ಫಾಲ್ಗುಣ ಯಾ ಚೈತ್ರ ಶುದ್ಧ (ಮೀನ ಮಾಸದಲ್ಲಿ) ದಲ್ಲಿ ನಡೆಯುವ ವೈರಮುಡಿ ಬ್ರಹ್ಮೋತ್ಸವವೂ, ಆಷಾಢ ಬಹುಳದಲ್ಲಿ ನಡೆಯುವ ಕೃಷ್ಣ ರಾಜಮುಡಿ ಉತ್ಸವವೂ, ಮತ್ತು ಕಾರ್ತಿಕ ಶುದ್ಧದಲ್ಲಿ ನಡೆಯುವ ರಾಜ ಮುಡಿ ಉತ್ಸವವೂ ಈ ಮೂರು ಮುಖ್ಯವಾದವುಗಳು.



**5. A. ಹೆಚ್ಚುಕಟ್ಟಳೆಗಳ ಉತ್ಸವಗಳಿಗೋಸುಗ ಈ ಕೆಳಗೆ ಕಂಡಂತೆ ದೇವಸ್ಥಾನದಿಂದ ಖರ್ಚು ಮಾಡಿ, ಉತ್ಸವಾದಿಗಳನ್ನು ವಿಜೃಂಭಣೆಯಿಂದ ವಿಧಿವತ್ತಾಗಿ ನಡೆಸುವರು.**

| ಸೇವೆಗಳು | ಮೊಬಲಗು. | | |
|---|---|---|---|
| ೧. ಯುಗಾದಿಯು | 19 | 0 | 0 |
| ೨. ತೆಪ್ಪೋತ್ಸವವು | 100 | 0 | 0 |
| ೩. ಶ್ರೀರಾಮ ನವಮಿಯು | 5 | 0 | 0 |
| ೪. ಬ್ರಹ್ಮೋತ್ಸವವು | 1000 | 0 | 0 |
| ೫. ಕೋಡೈ ತಿರುನಾಳ್ | 50 | 0 | 0 |
| ೬. ಶ್ರೀ ರಾಮಾನುಜಾಚಾರ್ಯರ ತಿರುನಕ್ಷತ್ರಗಳು | 100 | 0 | 0 |
| ೭. ವಸಂತೋತ್ಸವವು | 35 | 0 | 0 |
| ೮. ಆಳ್ವಾರ್ ಆಚಾರ್ಯರುಗಳ ತಿರುನಕ್ಷತ್ರವು | 9 | 0 | 0 |
| ೯. ನಮ್ಮಾಳ್ವಾರ್ ತಿರುನಕ್ಷತ್ರವು | 15 | 0 | 0 |
| ೧೦. ಹನುಮ ಜಯಂತಿಯು | 5 | 0 | 0 |
| ೧೧. ಪಲ್ಲವೋತ್ಸವವು | 50 | 0 | 0 |
| ೧೨. ಸಾರ್ವೈಕಾದಶಿ ಉತ್ಸವವು | 40 | 0 | 0 |
| ೧೩. ಪ್ರಥಮೈಕಾದಶಿ | 150 | 0 | 0 |
| ೧೪. ಶ್ರೀ ಕೃಷ್ಣರಾಜ ತಿರುನಾಳ್ | 2000 | 0 | 0 |
| ೧೫. ಶ್ರೀ ಯದುಗಿರಿಯಮ್ಮನವರ ವರ್ಧಂತಿಯು | 70 | 0 | 0 |
| ೧೬. ಆಡಿ ಶುಕ್ರವಾರದ ಸೇವೆಯು | 8 | 0 | 0 |
| ೧೭. ಉಪಾಕರ್ಮವು | 10 | 0 | 0 |
| ೧೮. ಶ್ರೀ ಪ್ರಸನ್ನ ಕೃಷ್ಣಸ್ವಾಮಿಯ ರಥೋತ್ಸವವು | 0 | 8 | 0 |
| ೧೯. ಚಾತುರ್ಮಾಸ್ಯ ಸಂಕಲ್ಪವು | 2 | 4 | 0 |
| ೨೦. ಶ್ರೀಕೃಷ್ಣ ಜಯಂತಿ | 95 | 0 | 0 |
| ೨೧. ಶ್ರೀ ಗೌರಿ ಹಬ್ಬವು | 5 | 0 | 0 |

| | | | | |
|---|---|---|---|---|
| ೨೨ | ಶ್ರೀ ಗಣೇಶನ ಹಬ್ಬವು | 5 | 0 | 0 |
| ೨೩. | ಶ್ರೀ ವೇದಾಂತ ದೇಶಿಕರವರ ತಿರುನಕ್ಷತ್ರವು | 1 | 0 | 0 |
| ೨೪. | ಪವಿತ್ರೋತ್ಸವವು | 60 | 0 | 0 |
| ೨೫ | ನವರಾತ್ರಿಯು | 300 | 0 | 0 |
| ೨೬ | ಶ್ರೀ ಜೀಯರ್‌ರವರ ತಿರುನಕ್ಷತ್ರವು | 12 | 0 | 0 |
| ೨೭. | ಶ್ರೀ ಪಿಳ್ಳೈಲೋಕಾಚಾರ್ಯರ ತಿರುನಕ್ಷತ್ರವು | 1 | 0 | 0 |
| ೨೮. | ದೀಪಾವಳಿ | 10 | 0 | 0 |
| ೨೯ | ಅಷ್ಟತೀರ್ಥೋತ್ಸವವು. | 155 | 0 | 0 |
| ೩೦. | ಬೃಂದಾವನೋತ್ಸವವು | 35 | 0 | 0 |
| ೩೧. | ಕೈಶಿಕ ದ್ವಾದಶಿಯು | 3 | 0 | 0 |
| ೩೨. | ಕೃತ್ತಿಕೋತ್ಸವವು | 25 | 0 | 0 |
| ೩೩. | ಧನುಸ್ಸಂಕ್ರಮಣವು | 45 | 0 | 0 |
| ೩೪. | ಶ್ರೀ ಅಮ್ಮನವರ ಥಡಾ ಉತ್ಸವವು | 15 | 0 | 0 |
| ೩೫. | ಕೊಠಾರೋತ್ಸವವು | 450 | 0 | 0 |
| ೩೬. | ಅಧ್ಯಯನೋತ್ಸವವು | 27 | 0 | 0 |
| ೩೭ | ಗರುಡ ಜಯಂತಿ | 3 | 0 | 0 |
| ೩೮. | ರಥಸಪ್ತಮಿ | 12 | 0 | 0 |
| ೩೯. | ಶ್ರೀ ಮಧ್ವನವಮಿ | 14 | 0 | 0 |
| ೪೦. | ಪುನರ್ವಸು ಉತ್ಸವವು | 0 | 8 | 0 |
| ೪೧ | ಸುಬ್ರಾಯನ ಷಷ್ಠಿ | 1 | 0 | 0 |
| ೪೨. | ಗ್ರಾಮದೇವತೆಯ ಹಬ್ಬವು | 1 | 0 | 0 |
| ೪೩. | ಶ್ರೀ ವರಾಹ ಜಯಂತಿಯು | 10 | 0 | 0 |
| ೪೪. | ಬೃಂದಾವನೋತ್ಸವವು | 35 | 0 | 0 |

# ೧. ಯುಗಾದಿಯು



ಇದು ಚೈತ್ರ ಶುದ್ಧ ಪಾಡ್ಯಮಿಯ ದಿವಸ ನಡೆಯುವುದು. ಈ ದಿವಸ ಶ್ರೀಯವರಿಗೆ ಸಹಸ್ರ ನಾಮಾರ್ಚನೆಯಾದ ನಂತರ ಎಲ್ಲಾ ಸನ್ನಿಧಿಗಳಲ್ಲಿಯೂ ಪಂಚಾಮೃತ ಅಭಿಷೇಕವು ನಡೆದು, ನಿತ್ಯಗಟ್ಟಲೆ ಶಾತ್ತುಮುರೈಯಾಗಿ, ಮಧ್ಯಾಹ್ನಾತ್ಪರ ಪಂಚಾಂಗ ಶ್ರವಣವಾಗಿ, ನಿವೇದನ, ಆರತಿ, ಪರಿವಟ್ಟಮಾಲೆ ತೀರ್ಥ ವಿನಿಯೋಗವಾಗುವುದು. ವೈರಮುಡಿಯ ಉತ್ಸವವು ಚೈತ್ರಮಾಸದಲ್ಲಿ ಬಂದರೆ, ಶ್ರೀಯವರು ಕೊಳಕ್ಕೆ ಬಿಜಮಾಡಿ, ಅಲ್ಲಿ ಮೇಲ್ಕಂಡಂತೆ ತಿರುವಾರಾಧನೆ ಮುಂತಾದುದು ಮುಗಿದನಂತರ ಆಸ್ಥಾನಕ್ಕೆ ಹಿಂತಿರುಗುವರು. ಫಾಲ್ಗುಣ ಮಾಸದಲ್ಲಿ ವೈರಮುಡಿಯು ಬಂದಲ್ಲಿ, ಆ ವೇಳೆ ಶ್ರೀಯವರು ಶ್ರೀಮದಾಚಾರ್ಯರ ಸನ್ನಿಧಿಗೆ ಬಿಜಮಾಡಿ, ಅಲ್ಲಿ ಮೇಲ್ಕಂಡ ರೀತಿಯಲ್ಲಿ ಉತ್ಸವಾದಿಗಳು ನಡೆಯುವುದು

---

# ೨. ತೆಪ್ಪೋತ್ಸವವು



ಇದು ಮೀನಮಾಸ, ಅಶ್ವಿನಿ ನಕ್ಷತ್ರದಲ್ಲಿ ನಡೆಯುವುದು

ವೈರಮುಡಿ ಉತ್ಸವದ ಅಂಕುರಾರ್ಪಣವಾಗುವುದಕ್ಕೆ ೪ ದಿವಸಗಳ ಮುಂಚೆ ಶ್ರೀ ಕೃಷ್ಣರಾಜಮುಡಿ ಅಂಕುರಾರ್ಪಣದಂತೆ ಅಂಕುರಾರ್ಪಣವು

ನಡೆಯುವುದು ಮೊದಲನೆಯ ದಿವಸ ಸಾಯಂಕಾಲ ಶ್ರೀಯವರೂ ಶ್ರೀ ಉಭಯನಾಚ್ಚಾರಮ್ಮನವರೂ ಮತ್ತು ಶ್ರೀ ಭಾಷ್ಯಕಾರರೂ ಸಹ ಗ್ರಾಮ ಪ್ರದಕ್ಷಿಣೆಯಿಂದ ತೆಪ್ಪ ಕೊಳಕ್ಕೆ ಬಿಜಮಾಡಿ ಅಲ್ಲಿ ತಿರುವಾರಾಧನೆ, ಆರತಿ, ತಳಿಗೆ ನಿವೇದನ ಮತ್ತು ವಿನಿಯೋಗವು ನಡೆಯುವುದು ನಂತರ ನಿತ್ಯ ಕಟ್ಟಲೆಯಾದ ಬಳಿಕ ವಾಹನೋತ್ಸವಕ್ಕೆ ಶ್ರೀಯವರು ಬಿಜಮಾಡಿ ಈಯಲ್ ಸೇವಾಕಾಲದೊಡನೆ ಗ್ರಾಮ ಪ್ರದಕ್ಷಿಣೆಯಾಗಿ, ವಾಹನ ಮಂಟಪಕ್ಕೆ ಬಿಜಮಾಡಿ ಅಲ್ಲಿ ತಿರುವಾರಾಧನೆ, ಆರತಿ, ಅಷ್ಟೋತ್ತರ, ತಳಿಗೆ ನಿವೇದನ, ತೀರ್ಥ ಶಾತ್ತುಮುರೈಯಾಗಿ, ದೇವಸ್ಥಾನಕ್ಕೆ ದಯಮಾಡಿಸು ವಾಗ ಜಲಪೀಠದ ಬಳಿ ತಿರುವಾರಾಧನೆ, ತಳಿಗೆ ನಿವೇದನ, ಆರತಿಯಾಗಿ ಮರಮರ್ಯಾದೆ, ರಾಜಮರ್ಯಾದೆಗಳು ನಡೆದು ನಂತರ ಸ್ವಲ್ಪ ಮುಂದೆ ದಯ ಮಾಡಿಸಿ, ಅಲ್ಲಿ ನಾಲ್ಕು ವೇದಗಳಿಗೆ ಅರುಳಪ್ಪಾಡು, ಮುಂತಾಗಿ ನಡೆಯು ವುದು. ತರುವಾಯ ಶ್ರೀ ಅಮ್ಮನವರ ಸನ್ನಿಧಿಯಲ್ಲಿನ ಬಳಿಯಲ್ಲಿ ಶಾತ್ತು ಮುರೈಯಾಗಿ ಶ್ರೀ ಭಾಷ್ಯಕಾರರ ಸನ್ನಿಧಿಯ ಬಳಿಯಲ್ಲಿಯೂ ತಿರುವಾರಾ ಧನೆ ಮುಂತಾದುದು ನಡೆದು, ಆಸ್ಥಾನಕ್ಕೆ ದಯಮಾಡಿಸುವರು ಈ ರೀತಿ ಯಿಂದ ಮೂರನೆಯ ದಿವಸವೂ ನಡೆಯುವುದು.

ತೆಪ್ಪೋತ್ಸವವಾದ ಅಶ್ವಿನಿ ನಕ್ಷತ್ರದ ದಿವಸ, ತೆಪ್ಪೋತ್ಸವದ ಮಂಟಪದಲ್ಲಿ ಮೇಲ್ಕಂಡಂತೆ ಶ್ರೀಯವರಿಗೆ ಉಪಚಾರ ಮುಂತಾದುದು ನಡೆದ ನಂತರ ತೆಪ್ಪೋತ್ಸವದ ಪ್ರಯುಕ್ತ ಕಲ್ಯಾಣಿಗೆ ಬಿಜಮಾಡಿ ಅಲ್ಲಿ ಮುಹೂರ್ತವಾಗಿ, ತೆಪ್ಪಕ್ಕೆ ಬಿಜಮಾಡಿಸುವರು. ಕಲ್ಯಾಣಿಯಲ್ಲಿ ಉತ್ಸ ವವಾದ ಬಳಿಕ, ಕರಗ ತಿರುವಾರಾಧನೆ, ಗಂಧದಎಣ್ಣೆ, ವಸಂತ ಮುಂತಾ ದುದು ಸಮರ್ಪಣೆಯಾಗಿ ಆರತಿಯಾಗುವುದು. ಆಮೇಲೆ ಗೋಷ್ಠಿ ವಿನಿ ಯೋಗ ಮುಂತಾದುದು ನಡೆದ ತರುವಾಯ ಶ್ರೀಯವರು ಆಸ್ಥಾನಕ್ಕೆ ಬಿಜಮಾಡಿಸುವರು.

---

## ೩. ಶ್ರೀರಾಮನವಮಿ.



ಇದು ಚೈತ್ರ ಶುದ್ಧ ನವಮಿಯ ದಿವಸ ನಡೆಯುವುದು, ಈ ದಿವಸ ಸೀತಾರಣ್ಯದಲ್ಲಿನ ಶ್ರೀರಾಮ ದೇವರಿಗೆ ಅಭಿಷೇಕವಾಗಿ, ಮಧ್ಯಾಹ್ನಾತ್ಪರ ಶ್ರೀ ಚಲುವರಾಯಸ್ವಾಮಿಯವರು ಅಲ್ಲಿಗೆ ದಯಮಾಡಿ, ಆರತಿ, ತಳಿಗೆ ನಿವೇದನ, ತೀರ್ಥವಿನಿಯೋಗ ಮುಂತಾದುದು ಕ್ರಮವರಿತು ನಡೆದು, ಆಸ್ಥಾನಕ್ಕೆ ಹಿಂತಿರುಗುವರು.



## ೪. ಬ್ರಹ್ಮೋತ್ಸವವು.



ಈ ಉತ್ಸವವನ್ನು ಹಿರಿಯ ತಿರುನಾಳೆಂದೂ, ಶ್ರೀ ವೈರಮುಡಿಯ ಮಹೋತ್ಸವವೆಂದೂ ಕರೆಯುವರು. ಇದು ಮೀನ ಮಾಸ ರೋಹಿಣಿ ನಕ್ಷತ್ರದಿಂದ ಚಿತ್ತಾ ಸಕ್ಷತ್ರದವರಿವಿಗೂ ನಡೆಯುವುದು. ಇದರಲ್ಲಿ ಮೀನ ಮಾಸ ಪುಷ್ಯ ನಕ್ಷತ್ರದಲ್ಲಿ ನಡೆಯುವ ಶ್ರೀ ವೈರಮುಡಿ ಎಂಬ ಕಿರೀಟ ಧಾರಣೋತ್ಸವವೂ, ಪುಬ್ಬಾ ನಕ್ಷತ್ರದಲ್ಲಿ ನಡೆಯುವ ಬ್ರಹ್ಮೋತ್ಸವವೂ, ಮತ್ತು ಹಸ್ತ ನಕ್ಷತ್ರದಲ್ಲಿ ಜರುಗುವ ಅವಭೃಥವೂ, ಪ್ರಾಮುಖ್ಯವಾದುವು.

ಅಂಕುರಾರ್ಪಣದ ದಿವಸ ಪ್ರಾತಃಕಾಲ ಶ್ರೀ ಯದುಗಿರಿಯಮ್ಮನವರಿಗೂ ಅಭಿಷೇಕವು ನಡೆಯುವುದು. ನಂತರ ನಿತ್ಯಕಟ್ಟಲೆಯಾಗಿ ಶ್ರೀ ಶಲ್ವಪ್ಪಿಳ್ಳೆಯವರು ಬೆಟ್ಟದ ಬಳಿ ಇರುವ ಮಂಟಪಕ್ಕೆ ದಯಮಾಡಿ ಅಲ್ಲಿ ಆರಾಧನೆ, ಆರತಿ, ನಿವೇದನ, ಅರುಳಪ್ಪಾಡು ಮುಂತಾದುದು ನಡೆದು, ವಸಂ

ತೋಟದ್ಯಾನದ ತೋಟಕ್ಕೆ ದಯಮಾಡಿ ಅಲ್ಲಿಯೂ ತಿರುವಾರಾಧನೆ ಮುಂತಾಗಿ ಜರುಗಿ ಆಸ್ಥಾನಕ್ಕೆ ಹಿಂತಿರುಗಿದ ನಂತರ ಅಭಿಷೇಕ ಮುಂತಾದುದು ನಡೆಯುವುದು.

ಸಾಯಂಕಾಲ ಶ್ರೀ ಅಮ್ಮನವರು ಪಲ್ಲಕ್ಕಿಯ ಉತ್ಸವದಿಂದ ಕಲ್ಯಾಣಿಗೆ ದಯಮಾಡಿ, ಅಲ್ಲಿ ಆರತಿ, ತಿರುವಾರಾಧನೆ, ಮುಂತಾಗಿ ನಡೆದು, ನಿತ್ಯ ಕಟ್ಟಲೆಯಾಗಿ ಡೋಲೋತ್ಸವದ ಅಂಕುರಾರ್ಪಣದ ಮೇರೆಗೆ ಅಂಕುರಾರ್ಪಣವಾಗಿ, ವಿಷ್ವಕ್ಸೇನರು ಮೃತ್ತಿಕಾಸಂಗ್ರಹಣದ ಪ್ರಯುಕ್ತ, ಶ್ರೀ ಆಂಜನೇಯಸ್ವಾಮಿಯವರ ಸನ್ನಿಧಿಗೆ ಬಿಜಮಾಡಿ, ಅಲ್ಲಿ ಮೃತ್ತಿಕಾ ಸಂಗ್ರಹಣ ಪೂರ್ವಕ ಯಾಗಶಾಲೆಯಲ್ಲಿ ಹೋಮ ಮುಂತಾದುದು ನಡೆದು ಶಯನಾಸನದ ತಳಿಗೆ ಮುಂತಾಗಿ ಜರುಗುವುದು ಇದೇ ರೀತಿಯಲ್ಲಿ ೧೨ ದಿವಸಗಳು ಅಹೋರಾತ್ರ ಶ್ರೀ ಶಲ್ವತಿರುನಾರಾಯಣರಿಗೆ ವಿಧಿವಿಹಿತವಾದ ಉತ್ಸವಗಳು ನಡೆಯುವುದರಿಂದಲೂ, ದಿನಚರಿ ನಡೆಯುವ ಉತ್ಸವಾದಿಗಳನ್ನೂ ಆಮೂಲಾಗ್ರವಾಗಿ ಬರೆಯಲು ಗ್ರಂಥಬಾಹುಳ್ಯ ಭಯದಿಂದ ಕೊಂಚ ಮಟ್ಟಿಗೆ ಮಹಾ ಜನಗಳ ತಿಳಿವಳಿಕೆಗೆ ಈ ಕೆಳಗ ಕಂಡಂತೆ ನಮೂದಿಸಿದೆ ಈ ಬ್ರಹ್ಮೋತ್ಸವವೂ ಕೂಡ ಶ್ರೀ ಕೃಷ್ಣರಾಜ ತಿರುನಾಳ್‌ನಂತೆ ನಡೆಯುವುದು

೧ನೆಯ ದಿವಸ ರೋಹಿಣಿ ನಕ್ಷತ್ರದಲ್ಲಿ ವೈರಮುಡಿಯ, ಉತ್ಸವಕ್ಕೆ ಅಂಕುರಾರ್ಪಣವೂ, ಪ್ರಾತಃಕಾಲ ಶ್ರೀ ಅಮ್ಮನವರಿಗೆ ಅಭಿಷೇಕವೂ, ನಡೆದು, ಶ್ರೀ ಉತ್ಸವರು ಭಂಡಿಕಾರ ಮಂಟಪ ಮತ್ತು ವಸಂತೋದ್ಯಾನ ಮಂಟಪ ಇವುಗಳ ಮಂಟಪೋತ್ಸವದಿಂದ ಆಸ್ಥಾನಕ್ಕೆ ದಯಮಾಡಿಸುವರು ತರುವಾಯ ಶ್ರೀ ಉತ್ಸವರಿಗೆ ಅಭಿಷೇಕವು ಜರುಗುವುದು.

ಮಧ್ಯಾಹ್ನ ಶ್ರೀ ಅಮ್ಮನವರು ಕಲ್ಯಾಣಿಗೆ ದಯಮಾಡಿಸಿ, ತಿರುವಾರಾಧನೆ ಮುಂತಾಗಿ ನಡೆದು ದೇವಸ್ಥಾನಕ್ಕೆ ದಯಮಾಡಿಸುವರು.

ಸಾಯಂಕಾಲ ನಿತ್ಯಕಟ್ಟಲೆ ನಡೆದು, ಅಂಕುರಾರ್ಪಣವು ನಡೆಯುವುದು ತರುವಾಯ ಮೃತ್ತಿಕಾ ಸಂಗ್ರಹಣದ ಪ್ರಯುಕ್ತ ಸೇನಾಧಿಪತಿಯ ಉತ್ಸವವು ಜರುಗುವುದು

೨ನೆಯ ದಿವಸ ಮೃಗಶಿರ ನಕ್ಷತ್ರದಲ್ಲಿ ಅಧಿವಾಸರ ಕಲ್ಯಾಣೋತ್ಸವವು ಜರುಗುವುದು.

ಪ್ರಾತಃಕಾಲ ನಿತ್ಯಕಟ್ಟಲೆಯು ಜರುಗಿ, ಶ್ರೀ ಅಮ್ಮನವರಿಗೆ ಅಭಿಷೇಕವು ನಡೆದು, ಶ್ರೀ ಉತ್ಸವರಿಗೆ ವಸಂತೋದ್ಯಾನದ ಮಂಟಪದಲ್ಲಿ ಮಂಟಪೋತ್ಸವವು ನಡೆದು, ಆಸ್ಥಾನಕ್ಕೆ ದಯಮಾಡಿಸುವರು.

ಮಧ್ಯಾಹ್ನ ಶ್ರೀ ಉತ್ಸವರಿಗೆ ಅಭಿಷೇಕವು ನಡೆದು, ಮಹಾ ನಿವೇದನವಾಗುವುದು. ತರುವಾಯ ಶ್ರೀ ಅಮ್ಮನವರು ಕಲ್ಯಾಣೋತ್ಸವಕ್ಕಾಗಿ ಧಾರಾಮಂಟಪಕ್ಕೆ ದಯಮಾಡಿಸುವರು.

ರಾತ್ರಿ ಸೇನಾಧಿಪತಿಯ ಉತ್ಸವವು ನಡೆದ ತರುವಾಯ ಶ್ರೀಚಲುವರಾಯಸ್ವಾಮಿಯವರು ಕಲ್ಯಾಣೋತ್ಸವದ ಪ್ರಯುಕ್ತ ಧಾರಾಮಂಟಪಕ್ಕೆ ದಯಮಾಡಿಸಿ, ಅಲ್ಲಿ ಕಲ್ಯಾಣ ಮಹೋತ್ಸವವು ನಡೆದು, ಆಸ್ಥಾನಕ್ಕೆ ದಯಮಾಡಿಸಿ, ನಿತ್ಯಕಟ್ಟಲೆ ಅಧಿವಾಸರ ರಕ್ಷಾಬಂಧನಾದಿ ಕಾರ್ಯಗಳು ಜರುಗುವುವು.

೩ನೆಯ ದಿವಸ ಆರಿದ್ರಾ ನಕ್ಷತ್ರದಲ್ಲಿ ಶ್ರೀ ರಾಮಾನುಜಾಚಾರ್ಯರವರಿಗೆ ಅಭಿಷೇಕವಾಗುವುದು

೩ನೆಯ ತಿರುನಾಳ್ ಪ್ರಾತಃಕಾಲ ನಿತ್ಯಕಟ್ಟಲೆಯಾದ ನಂತರ ಧ್ವಜಾರೋಹಣವಾಗಿ, ಸಮರಭೂಪಾಲವಾಹನೋತ್ಸವ ಮುಂತಾಗಿ ನಡೆಯುವುದು.

ಮಧ್ಯಾಹ್ನ ಶ್ರೀ ಉತ್ಸವರಿಗೆ ಪದ್ಮಶಾಲೆಯವರ ಮಂಟಪಡಿ ಗುಡಿಹಿಂದಣ ಮಂಟಪಡಿ, ತಿರುಮಲಾಚಾರ್ಯರ ಮಂಟಪಡಿ, ವಸಂತೋದ್ಯಾನ ಮಂಟಪಡಿ, ಇವುಗಳಲ್ಲಿ ಉತ್ಸವವಾಗುವುದು. ತರುವಾಯ ಶ್ರೀ ಅಮ್ಮನವರು ಕಲ್ಯಾಣಿಯ ಉತ್ಸವದಿಂದ ಆಸ್ಥಾನಕ್ಕೆ ದಯಮಾಡಿಸುವರು.

ರಾತ್ರಿ ನಿತ್ಯಕಟ್ಟಲೆಯಾದ ನಂತರ ಭೇರಿತಾಡನಾದಿ ಕಾರ್ಯವೂ,

ಹಂಸವಾಹನೋತ್ಸವವೂ ಆಗಿ ಶ್ರೀಯವರು ಯಾಗಶಾಲೆಗೆ ಬಿಜಮಾಡಿ, ಅನಂತರ ಆಸ್ಥಾನಕ್ಕೆ ದಯಮಾಡಿಸುವರು.

೪ನೆಯ ದಿವಸ ಪುನರ್ವಸು ನಕ್ಷತ್ರದಲ್ಲಿ ಎರಡನೆಯ ತಿರುನಾಳ್ ನಡೆಯುವುದು

ಪ್ರಾತಃಕಾಲ ನಿತ್ಯಕಟ್ಟಲೆಯಾಗಿ ಶ್ರೀ ಉತ್ಸವರಿಗೆ ಮಂತ್ರಿಯವರ ಮಂಟಪ ಮತ್ತು ವಸಂತೋದ್ಯಾನ ಮಂಟಪ ಇವುಗಳಲ್ಲಿ ಉತ್ಸವವು ನಡೆಯುವುದು

ಮಧ್ಯಾಹ್ನ ಶ್ರೀ ಅಮ್ಮನವರು ಕಲ್ಯಾಣಿಯ ಉತ್ಸವದಿಂದ ಆಸ್ಥಾನಕ್ಕೆ ದಯಮಾಡಿಸುವರು

ರಾತ್ರಿ ನಿತ್ಯಕಟ್ಟಲೆ ನಡೆದು, ಶೇಷವಾಹನೋತ್ಸವವಾಗಿ, ಪಡಿಯೇತ್ತ ನಡೆದು ಆಸ್ಥಾನಕ್ಕೆ ದಯಮಾಡಿಸುವರು.

೫ನೆಯ ದಿವಸ, ಮೂರನೆಯ ತಿರುನಾಳ್‌ನಲ್ಲಿ ನಾಗವಲ್ಲಿ ಮಹೋತ್ಸವವು ನಡೆಯುವುದು

ಪ್ರಾತಃಕಾಲ ನಿತ್ಯಕಟ್ಟಲೆಯು ನಡೆದು, ಶ್ರೀಯವರಿಗೂ ಮತ್ತು ಅಮ್ಮನವರಿಗೂ ಸಹ ಅಭಿಷೇಕವಾಗುವುದು. ತರುವಾಯ ಶ್ರೀಯವರಿಗೆ ತಿರುಮಂಗೈಯಾಳ್ವಾರ್ ಸನ್ನಿಧಿಯಲ್ಲ ಮಂಟಪೋತ್ಸವವು ನಡೆದು, ನಾಗವಲ್ಲಿ ಮಹೋತ್ಸವದ ಪ್ರಯುಕ್ತ ಕಲ್ಯಾಣಿಯ ಮಂಟಪಕ್ಕೆ ದಯಮಾಡಿಸುವರು.

ರಾತ್ರಿ ಶ್ರೀಯವರು ಗ್ರಾಮ ಪ್ರದಕ್ಷಿಣೆಯಿಂದ ಆಸ್ಥಾನಕ್ಕೆ ದಯಮಾಡಿಸುವರು. ನಿತ್ಯಕಟ್ಟಲೆಯಾದ ನಂತರ ಶ್ರೀ ಉತ್ಸವರಿಗೆ ಚಂದ್ರಮಂಡಲವಾಹನೋತ್ಸವವೂ, ಪಡಿಯೇತ್ತವೂ ನಡೆದು, ಆಸ್ಥಾನಕ್ಕೆ ಬಿಜಮಾಡಿಸುವರು

೬ನೆಯ ದಿವಸ ಪುಷ್ಯ ನಕ್ಷತ್ರದಲ್ಲಿ ನಾಲ್ಕನೆಯ ತಿರುನಾಳ್ ನಡೆಯುವುದು.

ಪ್ರಾತಃಕಾಲ ನಿತ್ಯಕಟ್ಟಲೆಯಾದ ಬಳಿಕ, ಶ್ರೀಯವರು ವಾನವಮಾಮಲೆ ಮರಕ್ಕೂ, ಕಲ್ಯಾಣಿಯ ಭುವನೇಶ್ವರಿ ಮರಕ್ಕೂ, ಕಲ್ಯಾಣ ಗಜೇಂದ್ರನ ಮುಡಿ ಮಂಟಪಕ್ಕೂ, ಶ್ರೀ ಕಂಠೀರವ ನರಸರಾಜ ಒಡೆಯರವರ ಮಂಟಪಕ್ಕೂ, ಶ್ರೀ ವೇದಾಂತ ದೇಶಿಕರ ಸನ್ನಿಧಿಗೂ, ತಂಗ್ಲಿ ಶೇಷಯ್ಯಂಗಾರ್‌ರವರ ಮಂಟಪಕ್ಕೂ, ಶ್ರೀ ರಾಜಒಡೆಯರವರ ಮಂಟಪಕ್ಕೂ (ವಾಹನ ಮಂಟಪವು) ದಯಮಾಡಿಸಿ, ಅಲ್ಲಲ್ಲಿ ವಿಧಿವಿಹಿತವಾದ ಸೇವೆಗಳೂ ಮತ್ತು ಪುದುವಟ್ಟಿನ ಸೇವೆಗಳೂ ನಡೆಯುವುವು

ಸಾಯಂಕಾಲ ಶ್ರೀ ವೈರಮುಡಿಯ ಪೆಟ್ಟಿಗೆಯ ಇಸ್ತಕಪಾಲ್ ಬಗ್ಯೆ ವಾರವಟ್ಟ ಮಂಟಪಕ್ಕೆ ಸಕಲ ವಾದ್ಯ ಮತ್ತು ಬಿರುದಾವಳಿಗಳೊಡನೆ ಲೌಕಿಕ ಮತ್ತು ವೈದಿಕ ಮಹಾಜನಗಳು ಹೋಗಿ ಮುಡಿಯ ಪೆಟ್ಟಿಗೆಗಳನ್ನು ಚಿನ್ನದ ಪಲ್ಲಕ್ಕಿಯಲ್ಲಿ ಬಿಜಮಾಡಿಸಿ ,ಗ್ರಾಮ ಪ್ರದಕ್ಷಿಣೆಯಿಂದ ದೇವಸ್ಥಾನಕ್ಕೆ ತರುತ್ತಾರೆ

ರಾತ್ರಿ ನಿತ್ಯಕಟ್ಟಲೆ ಮತ್ತು ಶ್ರೀ ವೈರಮುಡಿಯ ಕಟ್ಟಲೆ, ಮಹಾನಿವೇದನ, ವಿಸಿಯೋಗವಾದನಂತರ ಶ್ರೀಯವರಿಗೆ ವೈರಮುಡಿ ಕಿರೀಟ ಧಾರಣೆಯು, ಗರುತ್ಮಂತನ ಮೂಲಕ ಧಾರಣೆಯಾಗಿ, ಮಂಗಳಾರತಿ ಮುಂತಾದುದು ನಡೆಯುವುದು. ಆಮೇಲೆ ಉತ್ಸವಕ್ಕೆ ಪ್ರಾರಂಭವಾಗಿ, ಬೆಳಗಿನ ಝಾವ ಸುಮಾರು ೫ ಘಂಟೆಯವರಿವಿಗೆ ಗ್ರಾಮ ಪ್ರದಕ್ಷಿಣೆಯಿಂದ ಉತ್ಸವವು ನಿಧಾನವಾಗಿ ನಡೆದು, ತರುವಾಯ ಶ್ರೀಯವರನ್ನು ವಾಹನ ಮಂಟಪದಲ್ಲಿ ಬಿಜಮಾಡಿಸುವರು ಅನಂತರ ಶ್ರೀಯವರಿಗೆ ರಾಜಮುಡಿ ಧಾರಣೆಯಿಂದ ಪಡಿಯೇತ್ತ ನಡೆದು, ಆಸ್ಥಾನಕ್ಕೆ ಬಿಜಮಾಡಿಸುವರು.

೭ನೆಯ ದಿವಸ ಐದನೆಯ ತಿರುನಾಳ್ ಜರುಗುವುದು.

ಪ್ರಾತಃಕಾಲ ನಿತ್ಯಕಟ್ಟಲೆಯಾದ ಬಳಿಕ ಶ್ರೀಯವರು ಗಂಡಾಮಾಲಿಯವರ ಮಂಟಪ, ಅಮೃತವಲ್ಲಿ ತಾಯಾರ್ ಮಂಟಪ, ಅಹೋಬಿಲ ಬೃಂ

ದಾವನ, ಬೈರಾಗಿ ಮಠದ ಕೆರೆಯ ಬಾಗಿಲು, ಚಲುವರಾಯ ಮೊದಲಿಯಾ ರ್ರವರ ಮಂಟಪ, ದೊಡ್ಡೈಯ್ಯಾಚಾರ್ಯರ ಮಂಟಪ, ವಸಂತೋದ್ಯಾನ ಮಂಟಪ, ಇವುಗಳಲ್ಲಿ ನಡೆಯುವ ಕೈಂಕರ್ಯಗಳನ್ನು ಸ್ವೀಕರಿಸಿದ ತರುವಾಯ ಪ್ರಹ್ಲಾದ ಪರಿಪಾಲನೋತ್ಸವವು ಜರುಗುವುದು.

ರಾತ್ರಿ ನಿತ್ಯಕಟ್ಟಲೆಯು ನಡೆದು, ಶ್ರೀಯವರಿಗೆ ಗರುಡೋತ್ಸವವಾಗಿ ಪಡಿಯೇತ್ತದಿಂದ ಆಸ್ಥಾನಕ್ಕೆ ಹಿಂತಿರುಗುವರು.

೮ನೆಯ ದಿವಸ ಆರನೆಯ ತಿರುನಾಳ್ ನಡೆಯುವುದು.

ಪ್ರಾತಃಕಾಲ ನಿತ್ಯಕಟ್ಟಲೆಯು ನಡೆದ ತರುವಾಯ ಶ್ರೀಯವರು ಚಲುವಯ್ಯನವರ ಮಂಟಪ, ತೇರಡಿ ಮಂಟಪ, ಶ್ರೀ ಜೀಯರ್‌ರವರ ಸನ್ನಿಧಿ, ಶ್ರೀ ಪುಳ್ಳಲೋಕಾಚಾರ್ಯರ ಮಂಟಪ, ನರಸಿಂಹಾಚಾರ್ಯರ ಮಂಟಪ, ಕೃಷ್ಣೈಯ್ಯಂಗಾರ್ಯರ ಮಂಟಪ, ಅಂಟ್ರಾ ಒಡೆಯರ ಮಂಟಪ ಹೊಸ ಮಂಟಪ, ನಾರಸುದೇವರ ಮಂಟಪ, ಬೈರಾಗಿ ಮಠ, ಅಳಹಿಯ ಮಣವಾಳ ಮಂಟಪ, ಅಹೋಬಿಲ ಮಠ ಇವುಗಳಲ್ಲಿ ಉತ್ಸವ ಸೇವಾರ್ಥಗಳು ನಡೆದು ಗಜೇಂದ್ರ ಮೋಕ್ಷದ ಉತ್ಸವಕ್ಕೆ ಕಲ್ಯಾಣಿಗೆ ಬಿಜಮಾಡಿ, ಶ್ರೀಯವರು ಗಜೇಂದ್ರನಿಗೆ ಮೋಕ್ಷ ಪ್ರದಾನವಂ ಮಾಡಿ, ದೇವಸ್ಥಾನಕ್ಕೆ ದಯಮಾಡಿಸುತ್ತಾರೆ.

ರಾತ್ರಿ ನಿತ್ಯಕಟ್ಟಲೆಯಾದ ನಂತರ ಆನೆಯ ವಾಹನೋತ್ಸವವೂ ಕುದುರೆಯ ವಾಹನೋತ್ಸವವೂ, ನಡೆದು, ಪಡಿಯೇತ್ತದಿಂದ ಆಸ್ಥಾನಕ್ಕೆ ದಯಮಾಡಿಸುವರು.

೯ನೆಯ ದಿವಸ ಏಳನೆಯ ತಿರುನಾಳ್ ಆದ ಪ್ರಯುಕ್ತ, ಪುಬ್ಬಾ ನಕ್ಷತ್ರದಲ್ಲಿ ಬ್ರಹ್ಮ ರಥೋತ್ಸವವು ನಡೆಯುವುದು.

ಪ್ರಾತಃಕಾಲ ನಿತ್ಯಕಟ್ಟಲೆಯು ನಡೆದು, ಯಾತ್ರಾದಾನದಿಂದ ಉತ್ಸವವಾಗಿ, ಶ್ರೀಯವರು “ ಇತಿ ನಿಖಿಲಜನಾನಾಮಿಪ್ಸಿತಾರ್ಥಪ್ರದಾಯ ಕುಲ

ಪತಿರನುಣಾಮುಬ್ಧಿಕನ್ಯಾ ಪತಿರ್ವ:॥ ಯದುಗಿರಿ ತಟಭಾಗೇ ಯಾಚಮಾನೋ ದದಾತಿ ಸ್ವಪದ ಕಮಲಸೇವಾ ರಾಜ್ಯ ಸಾಮ್ರಾಜ್ಯ ಲಕ್ಷ್ಮೀಂ''॥ಎಂಬಮರ್ಯಾದೆಯಲ್ಲಿ ದಿವ್ಯ ರಥಾರೋಹಣದಿಂದ, ತೀರ್ಥ, ವಿನಿಯೋಗ ಮುಂತಾಗಿ ನಡೆದ ತರುವಾಯ ರಥಚಲನೆಯಿಂದ, ಯಥಾಸ್ಥಾನಕ್ಕೆ ನಿಲ್ಲುವರು. ರಥಾವರೋಹಣವಾಗಿ ದೇವಸ್ಥಾನಕ್ಕೆ ದಯಮಾಡಿಸಿದ ತರುವಾಯ ಅಭಿಷೇಕವು ನಡೆಯುವುದು

ರಾತ್ರಿ ನಿತ್ಯಕಟ್ಟಲೆಯು ನಡೆದ ಮೇಲೆ, ಶ್ರೀಯವರಿಗೆ ಬಂಗಾರದ ಪಲ್ಲಕ್ಕಿಯಲ್ಲಿ ಉತ್ಸವವು ನಡೆಯುವುದು

೧೦ನೆಯ ದಿವಸ ಎಂಟನೆಯ ತಿರುನಾಳ್ ಆದುದರಿಂದ ತೆಪ್ಪೋತ್ಸವವು ನಡೆಯುವುದು

ಪ್ರಾತಃಕಾಲ ನಿತ್ಯಕಟ್ಟಲೆಯಾದ ಬಳಿಕ, ಶ್ರೀಉತ್ಸವರು ಶ್ರೀ ಭಾಷ್ಯಕಾರರ ಸನ್ನಿಧಿ, ಯೋಗಾನೃಸಿಹ್ಮಾಚಾರ್ಯರ ಮಂಟಪ, ಶ್ರೀ ಜೀಯರ್ ರವರ ಸನ್ನಿಧಿ, ಶ್ರೀ ನಂಜೀಯರ್ ಸನ್ನಿಧಿ, ಹೊನ್ನಶೆಟ್ರವರ ಮಂಟಪ, ಶ್ರೀ ವೇದಾಂತ ದೇಶಿಕರವರ ಸನ್ನಿಧಿ, ಶ್ರೀ ಸರಸ್ವತೀ ಭಂಡಾರ ಇವುಗಳಲ್ಲಿ ಮಂಟಪೋತ್ಸವಗಳು ನಡೆದು, ದೇವಸ್ಥಾನಕ್ಕೆ ಬಿಜಮಾಡುವರು

ರಾತ್ರಿ ತೆಪ್ಪೋತ್ಸವವು ನಡೆದು, ಕುದುರೆಯ ವಾಹನೋತ್ಸವವಾದ ಬಳಿಕ ಶ್ರೀಯವರು ಆಸ್ಥಾನಕ್ಕೆ ದಯಮಾಡಿಸುತ್ತಾರೆ.

೧೧ನೆಯ ದಿವಸ ಒಂಬತ್ತನೆಯ ತಿರುನಾಳ್ ಆದ ಪ್ರಯುಕ್ತ ಹಸ್ತ ನಕ್ಷತ್ರವಲ್ಲಿ ಅವಭೃತವು ಜರುಗುವುದು

ಪ್ರಾತಃಕಾಲದಲ್ಲಿ ನಗರ ಶೋಧನೆಯಿಂದ ಸಂಧಾನ ಸೇವೆಯು ಪೂರ್ತಿಯಾಗಿ ನಿತ್ಯಕಟ್ಟಲೆ ಮತ್ತು ಗರುಡಸ್ತಪನವು ಜರುಗಿದ ತರುವಾಯ, ಶ್ರೀ ತಿರುಮಂಗೈಯಾಳ್ವಾರ್ ರವರ ಸನ್ನಿಧಿ, ತಂಗಳಸ್ನದ ಮಂಟಪ, ಇವುಗಳಲ್ಲಿ ಮಂಟಪೋತ್ಸವವು ನಡೆದು, ತಿರುಕಲ್ಯಾಣಿಯಲ್ಲಿ ಅವಭೃತವು ನಡೆದು, ಶ್ರೀಯವರು ಶ್ರೀ ಪರಕಾಲ ಮಠಕ್ಕೆ ದಯಮಾಡಿಸುವರು. ಅಲ್ಲಿ

ಶ್ರೀ ಉತ್ಸವರಿಗೆ ಅಲಂಕಾರದಿಂಡ ಕ್ರಮವರಿತು ಪಟ್ಟಾಭಿಷೇಕವು ಜರುಗುವುದು

ರಾತ್ರಿ ಸಮುರಭೂಪಾಲ ವಾಹನೋತ್ಸವವಾಗಿ, ಆಸ್ಥಾನಕ್ಕೆ ದಯಮಾಡಿಸಿದ ನಂತರ, ಪಡಿಯೇತ್ತ ನಡೆವು, ನಿತ್ಯಕಟ್ಟಲೆಯಿಂದ ಯಾಗಶಾಲೆಯಲ್ಲಿ ಪೂರ್ಣಾಹುತಿಯು ಜರುಗುವುದು.

೧೨ನೆಯ ದಿವಸ ಹತ್ತನೆಯ ತಿರುನಾಳ್ ಪ್ರಯುಕ್ತ. ಚಿತ್ರಾನಕ್ಷತ್ರದಲ್ಲಿ ಮಹಾಭಿಷೇಕವು ನಡೆಯುವದು

ಪ್ರಾತಃಕಾಲದಲ್ಲಿ ದೇವಸ್ಥಾನವನ್ನೆಲ್ಲಾ ವಿಧಿಪ್ರಕಾರ ಶುದ್ಧಿ ಮಾಡಿ, ಪುಣ್ಯಾಹ, ಪಂಚಗವ್ಯಪ್ರೋಕ್ಷಣೆಯಿಂದ ಎಲ್ಲಾ ಸನ್ನಿಧಿಗಳಿಗೂ, ಕಲ್ಯಾಣಿಗೂ ಸಹ ಪ್ರೋಕ್ಷಣೆಯಾಗುವುದು. ನಂತರ ಕಲ್ಯಾಣಿಯಿಂದ ಆಗ್ರೋದಕವನ್ನು ತಂದು ಶ್ರೀ ತಿರುನಾರಾಯಣಸ್ವಾಮಿಗೂ, ಶ್ರೀ ಉತ್ಸವರುಗಳಿಗೂ ಮತ್ತು ಶ್ರೀ ರಾಮಾನುಜಾಚಾರ್ಯರಿಗೂ ಶ್ರೀ ಕೃಷ್ಣರಾಜ ತಿರುನಾಳಿನಲ್ಲಿ ಮಾಡುವಂತೆ, ಮಹಾಭಿಷೇಕವು ನಡೆಯುವುದು

ರಾತ್ರಿ ಪುಷ್ಪಯಾಗ, ಕತ್ತಲೆಯ ಪ್ರದಕ್ಷಿಣೆಯಿಂದ, ಶ್ರೀಯವರಿಗೆ ಹನುಮಂತೋತ್ಸವವಾಗಿ ಆಸ್ಥಾನಕ್ಕೆ ಬಿಜಮಾಡಿಸುವರು. ಅಲ್ಲದೆ ಚಿತ್ರಾ ನಕ್ಷತ್ರದ ಉತ್ಸವಾದಿಗಳೂ ನಡೆಯುವುವು. ತರುವಾಯ ಶಯ್ಯಾಸನದ ತಳಿಗೆಯ ನಿವೇದನ ಮೊದಲಾದುದು ಜರುಗಿದ ನಂತರ, ಅರ್ಧರಾತ್ರಿಯಲ್ಲಿ ಮೂಗಬಲಿ ಎಂಬುವದು ನಡೆಯುವುದು.



# ೫. ಕೋಡೈ ತಿರುನಾಳ್.



ಇದು ಮೀನ ಮಾಸ ಚಿತ್ರಾ ನಕ್ಷತ್ರದಲ್ಲಿ ನಡೆಯುವುದು. ಬ್ರಹ್ಮೋತ್ಸವದ ಮಹಾಭಿಷೇಕದಿಂದ ಅಮಾವಾಸ್ಯೆ ಪೂರಾ ನಡೆಯತಕ್ಕ ಉತ್ಸವಗಳಿಗೆ ಕೋಡೈತಿರುನಾಳೆಂದು ಹೆಸರು.

ರಾತ್ರಿ ನಿತ್ಯಕಟ್ಟಲೆಯಾದ ನಂತರ ಶ್ರೀ ಉತ್ಸವರು ಕೋಡೈತಿರುನಾಳ್ ಪ್ರಯುಕ್ತ ಶ್ರೀ ಚಕ್ರತ್ತಾಳ್ವಾರ್ ಸನ್ನಿಧಿಗೂ ಮತ್ತು ಇದರಬಳಿ ಇರುವ ಮಂಟಪಕ್ಕೂ ದಯಮಾಡಿಸಿ, ತರುವಾಯ ಶ್ರೀ ಭಾಷ್ಯಕಾರರ ಸನ್ನಿಧಿಯ ಬಳಿ ತಿರುವಾರಾಧನೆ ಆರತಿಯಾಗಿ, ಶ್ರೀ ಚಕ್ರತ್ತಾಳ್ವಾರ್ ಸನ್ನಿಧಿಯಲ್ಲಿಯೂ ತಿರುವಾರಾಧನೆ, ಆರತಿ, ಅರುಳಪ್ಪಾಡು, ಪ್ರಬಂಧ ಪಾರಾಯಣವಾಗಿ, ಶ್ರೀ ಅಮ್ಮನವರ ಸನ್ನಿಧಿ ಬಳಿಯಲ್ಲಿಯೂ ತಿರುವಾರಾಧನೆ, ತಳಿಗೆ ನಿವೇದನ, ಆರತಿಯಾಗಿ, ಶ್ರೀಮದಾಚಾರ್ಯಪುರುಷರ ಚೂರ್ಣಿಕೆ ಪಠನದಿಂದ ವೀಣೆ, ಸಂಗೀತ, ತಾಳಮೇಳದಿಂದ ರಾಜ ಮರ್ಯಾದೆಯು ನಡೆದು ನಿತ್ಯಕಟ್ಟಲೆ ಮುಂತಾಗಿ ನಡೆಯುವುದು. ಇದೇ ರೀತಿಯಲ್ಲಿ ಅಮಾವಾಸ್ಯೆಯವರೆಗೂ ನಡೆಯುವುದು. ಏಕಾದಶಿಯ ದಿವಸ ಶ್ರೀಗಂಧದ ಸಮರ್ಪಣೆಯಿಂದ ದಕ್ಷಿಣಬಾಗಿಲಿನಲ್ಲಿ ಏಕಾಂತವಾಗಿ ಶ್ರೀಯವರು ಶ್ರೀ ಚಕ್ರತ್ತಾಳ್ವಾರ್ ಸನ್ನಿಧಿಯ ಬಳಿ ಬಿಜಮಾಡಿಸಿದ ನಂತರ ಆರತಿಯಾಗಿ, ಉಳಿಕೆಯ ಉತ್ಸವಾದಿಗಳು ಮೊದಲಿನಂತೆ ನಡೆಯುವುದು ಅಮಾವಾಸ್ಯೆಯ ದಿವಸ ಶ್ರೀಯವರು ವೈಕುಂಠನಾರಾಯಣನ ಅವತಾರವನ್ನು ಸ್ವೀಕರಿಸಿ, ದಕ್ಷಿಣದ ಕಡೆಯ ಬಾಗಿಲಿನಿಂದ ಏಕಾಂತವಾಗಿ ವೈಲ್‌ಮಾಳಿಗೆಯ ಮೇಲೆ ಬಿಜಮಾಡಿಸಿ, ಅಲ್ಲಿ ಆರತಿ ಮುಂತಾದುದು ಕ್ರಮವರಿತು ನಡೆಯುವುದು. ಆ ಮೇಲೆ ಚಕ್ರತ್ತಾಳ್ವಾರ್‌ರವರ ಸನ್ನಿಧಿ ಬಳಿಯಲ್ಲಿಯೂ, ತಿರುಕ್ಕಚ್ಚಿನಂಬಿಯವರ ಸನ್ನಿಧಿಯ ಬಳಿಯಲ್ಲಿಯೂ ಮತ್ತು ಯದುಗಿರಿಯಮ್ಮನವರ ಸನ್ನಿಧಿ ಬಳಿಯಲ್ಲಿಯೂ ತಿರುವಾರಾಧನೆ, ನಿವೇದನ, ಆರತಿ

ಯಾಗಿ, ಅಲ್ಲಿಂದ ಹಿಂತಿರುಗಿ ದೇವಸ್ಥಾನದ ಶ್ರೀ ತಿರುನಾರಾಯಣ ಸ್ವಾಮಿಯವರ ಭಂಡಾರದ ಬಾಗಿಲನ ಮುಖಾಂತರವಾಗಿ ಬಂದು ಆಸ್ಥಾನ ವನ್ನು ಸೇರುವರು. ತರುವಾಯ ಶಯ್ಯಾಸನದ ತಳಿಗೆ ನಿವೇದನ ಮುಂ ತಾಗಿ ನಡೆಯುವುದು

## ೬. ಶ್ರೀ ರಾಮಾನುಜಾಚಾರ್ಯರವರ ತಿರುನಕ್ಷತ್ರವು.



ಇದು ಮೇಷ ಮಾಸ ಆರಿದ್ರಾ ನಕ್ಷತ್ರದಲ್ಲಿ ನಡೆಯುವುದು.

ಈ ಉತ್ಸವವು ಪೂರ್ವಾಭಾದ್ರಪದದಿಂದ ಆರಿದ್ರಾ ನಕ್ಷತ್ರದವರಿ ವಿಗೆ ೧೦ ದಿವಸಗಳು ನಡೆಯುವುದು ತಿರುನಕ್ಷತ್ರಕ್ಕೆ ಹನ್ನೊಂದು ದಿವಸದ ಹಿಂದಿನ ಸಾಯಂಕಾಲ ಶ್ರೀ ಚಲುವರಾಯಸ್ವಾಮಿಯವರು ಶ್ರೀ ರಾಮಾನುಜಾಚಾರ್ಯರವರ ಸನ್ನಿಧಿಗೆ ಬಿಜಮಾಡಿ, ಅಲ್ಲಿ ತಿರುವಾರಾ ಧನೆ, ಆರತಿ, ತಳಿಗೆ ನಿವೇದನವಾಗಿ, ಆಸ್ಥಾನಕ್ಕೆ ದಯಮಾಡಿಸುವರು. ಅದೇ ರೀತಿಯಲ್ಲಿ ಪ್ರತಿನಿತ್ಯವೂ ಪ್ರಾತಃಕಾಲ ನಿತ್ಯಕಟ್ಟಲೆ ನಡೆದು ಶಾತ್ತುಮುರೈ ಆದನಂತರ ಒಂದೊಂದು ದಿವಸ ಒಂದೊಂದು ವಾಹನದ ಪ್ರಕಾರ ವಾಹನೋತ್ಸವಗಳು ನಡೆದು, ತಿರುವಾರಾಧನೆ, ಅಷ್ಟೋತ್ತರ ಆರತಿ, ತಳಿಗೆ ಮುಂತಾದುವು ನಡೆಯುವುವು. ರಾತ್ರಿಯಲ್ಲಿ ಪಲ್ಲಕ್ಕಿಯ ಉತ್ಸವವೂ, ಈಯಲ್ ಪ್ರಬಂಧದ ಸೇವಾಕಾಲ ಮುಂತಾದುವೂ ನಡೆಯು ವುವು ಸಾಯಂಕಾಲ ಉತ್ಸವವಾದ ನಂತರ ಶ್ರೀ ಅಮ್ಮನವರ ಸನ್ನಿಧಿ ಯಲ್ಲಿ ಅಷ್ಟೋತ್ತರವು ನಡೆದು, ತರುವಾಯ ಶ್ರೀಮದಾಚಾರ್ಯರ ಸನ್ನಿಧಿ ಯಲ್ಲಿ ಅಲಂಕಾರ ತಿರುವಾರಾಧನೆ, ಸೇವಾಕಾಲ, ತೀರ್ಥವಿನಿಯೋಗ ಮುಂತಾಗಿ ನಡೆಯುವುವು ಈ ರೀತಿಯಲ್ಲಿ ಐದು ದಿವಸಗಳು ಜರುಗು ವುವು. ಆರನೆಯ ದಿವಸ ಪ್ರಾತಃಕಾಲ ವಾಹನೋತ್ಸವವು ನಡೆಯುವುದು

ರಾತ್ರಿ ನಿತ್ಯಕಟ್ಟಲೆಯು ನಡೆದ ತರುವಾಯ ಹೂವಿನ್ನವಮುಡಿ ಉತ್ಸವವು ನಡೆದು ಆಸ್ಥಾನಕ್ಕೆ ದಯಮಾಡಿ, ಆರತಿ, ಅಷ್ಟೋತ್ತರ, ತಳಿಗೆ ನಿವೇದನ ಮತ್ತು ತೀರ್ಥವಿನಿಯೋಗ ಮುಂತಾಗಿ ಕ್ರಮವರಿತು ನಡೆಯುವುದು. ಏಳು ಮತ್ತು ಎಂಟನೆಯ ದಿವಸಗಳಲ್ಲಿ ಎರಡು ವೇಳೆಯಲ್ಲಿಯೂ ವಾಹ ನೋತ್ಸವವು ಪದ್ಧತಿಯಂತೆ ನಡೆಯುವುದು.

ಒಂಭತ್ತನೆಯ ದಿವಸ ರಥೋತ್ಸವವು ನಡೆಯುವುದು. ಪ್ರಾತಃಕಾಲ ನಿತ್ಯಕಟ್ಟಲೆಯು ನಡೆದು ಯಾತ್ರಾದಾನದಿಂದ ಒಳಪ್ರಾಕಾರ ಪ್ರದಕ್ಷಿಣೆ ಯಿಂದ ಚತುಸ್ಥಾನಾರ್ಚನೆಯಾಗಿ, ದಯಮಾಡಿ, ಧ್ವಜಸ್ಥಂಭದ ಬಳಿ ಶ್ರೀ ಭಾಷ್ಯಕಾರರಿಗೆ ಶ್ರೀ ಶಠಾರಿ, ಪರಿವಟ್ಟ, ಮಾಲೆ, ಅಭಯಹಸ್ತ, ಮುಂತಾದ ಮರ್ಯಾದೆಯಾದ ನಂತರ ರಥಕ್ಕೆ ಬಿಜಮಾಡಿದ ತರುವಾಯ, ಶ್ರೀಯವರಿಗೆ ವೈರಮುಡಿ ರಥದಂತೆ ವೈಭವವು ನಡೆಯುವುದು. ರಥಾವ ರೋಹಣವಾದ ಬಳಿಕ ಶ್ರೀ ಭಾಷ್ಯಕಾರರು ಯತಿರಾಜ ಮಠಕ್ಕೆ ಬಿಜ ಮಾಡಿ, ತಿರುವಾರಾಧನೆ, ಆರತಿ, ನಿವೇದನ, ತೀರ್ಥವಿನಿಯೋಗ ಮುಂತಾ ದುದು ಜರುಗಿದ ನಂತರ ಕೂತುವಾಹನದಿಂದ ಆಸ್ಥಾನಕ್ಕೆ ದಯಮಾಡಿ ಸುವರು.

ಹತ್ತನೆಯ ದಿವಸ ಶ್ರೀ ಭಾಷ್ಯಕಾರರ ತಿರುನಕ್ಷತ್ರವು ನಡೆಯುವುದು.

ಈ ದಿವಸ ನಿತ್ಯಕಟ್ಟಲೆಯಾದ ನಂತರ ಕೂತುವಾಹನದಿಂದ ಆಸ್ಥಾ ನಕ್ಕೆ ದಯಮಾಡಿದ ಮೇಲೆ ಯಥಾಕ್ರಮವಾಗಿ ಅಭಿಷೇಕಾನಂತರ ಉ ಳಿದ ಉಪಚಾರಗಳೆಲ್ಲವೂ ಆಳ್ವಾರ್ ತಿರುನಕ್ಷತ್ರದಂತೆ ನಡೆಯುವುದು. ಸಾಯಂಕಾಲ ಪಲ್ಲಕ್ಕಿಯಲ್ಲಿ ಸೀತಾರಣ್ಯಕ್ಕೆ ಬಿಜಮಾಡಿ, ಅಲ್ಲಿ ತಿರುವಾರಾ ಧನೆ, ಆರತಿ, ತೀರ್ಥವಿನಿಯೋಗ ಮುಂತಾದುದು ನಡೆದು ಅಲ್ಲಿಂದ ಶ್ರೀ ವೇದಾಂತ ದೇಶಿಕರವರ ಸನ್ನಿಧಿಗೆ ದಯಮಾಡಿ, ಅಲ್ಲಿಯೂ ತಿರುವಾರಾಧನೆ, ಆರತಿ, ತಳಿಗೆ ನಿವೇದನ, ಶಾತ್ತುಮುರೈ, ವಿನಿಯೋಗ ಮುಂತಾದುದು ನಡೆ ಯುವುದು. ಅದರಂತೆಯೇ ಶ್ರೀ ಜೀಯರವರ ಸನ್ನಿಧಿಗೆ ಬಿಜಮಾಡಿ ಅಲ್ಲಿಯೂ ಮೇಲ್ಕಂಡಂತೆ ಉಪಚಾರಗಳು ನಡೆದ ನಂತರ ಹಿಂತಿರುಗಿ ಶ್ರೀಯವರು

ಗೋಪುರದ ಬಾಗಿಲಿಗೆ ಬಿಜಮಾಡುವಲ್ಲಿ ಶ್ರೀ ಶಲ್ವಪಿಳ್ಳೆಯವರಿಗೆ ಹತ್ತು ಕುಲಾವಿ ಉತ್ಸವದ ಪ್ರಯುಕ್ತ ಎದುರು ಸೇವೆಗೆ ಬಿಜಮಾಡಿ, ಕರಗದ ತಿರುವಾರಾಧನೆ, ಆರತಿ, ನಿವೇದನ ರಾಮಾನುಜ ನೂತ್ತಂದಾದಿ ಶಾತ್ತು ಮುರೈಯಾಗಿ ನಂತರ ಎಂಟು ಮೂಲೆಗಳಲ್ಲಿಯೂ ಒಂದೊಂದು ತಿರುವಾ ರಾಧನೆ, ಕಷಾಯಿ ಬದಲಾವಣೆ ಸಹ ಆಗಿ ತಳಿಗೆ ನಿವೇದನವಾದ ನಂತರ, ಪಾರಶಾಲೆಯ ಬಳಿ ಹೂವ್ವನ್ನು ಧರಿಸಿ, ಶ್ರೀ ಭಾಷ್ಯಕಾರರ ಸನ್ನಿಧಿಗೆ ದಯಮಾಡಿ ಅಲ್ಲಿಯೂ ತಿರುವಾರಾಧನೆ, ಅಷ್ಟೋತ್ತರ, ನಿವೇದನ, ಶಾತ್ತು ಮುರೈ ಮುಂತಾದುವು ನಡೆದ ನಂತರ ಆಸ್ಥಾನಕ್ಕೆ ಬಿಜಮಾಡಿಸುವರು

ಇವರು ಮೇಷಮಾಸ ಆರ್ದ್ರಾನಕ್ಷತ್ರದಲ್ಲಿ ಶ್ರೀ ಪೆರಂಬೂದೂರಿನಲ್ಲಿ ಶೇಷಾಂಶ ಸಂಭೂತರಾಗಿ ಯತೀಂದ್ರರ್, ಭಾಷ್ಯಕಾರರ್ **ಎಂಬ ಹೆಸರು ಗಳಿಂದ, ಅವತರಿಸಿದರು.** ಈ ಮಹನೀಯರು ಶ್ರೀ ರಂಗನಾಥ, ಶ್ರೀ ಶ್ರೀನಿವಾಸ, ಶ್ರೀ ವರದರಾಜ ಮತ್ತು ಯದುಗಿರಿಯ ಶ್ರೀ ತಿರುನಾರಾ ಯಣರನ್ನು ನಿತ್ಯಸೇವೆಯಂ ಮಾಡಿಕೊಂಡಿದ್ದು, ಶ್ರೀಮದ್ವಿಶಿಷ್ಟಾದ್ವೈತ ಸಿದ್ಧಾಂತ ಸ್ಥಾಪನಾಚಾರ್ಯರೆನಿಸಿಕೊಂಡರು.

## ೭. ಮೊದಲಿಯಾಣ್ಡಾರವರ ತಿರುನಕ್ಷತ್ರವು.



ಇದು ಮೇಷ ಮಾಸ ಪುನರ್ವಸು ನಕ್ಷತ್ರದಲ್ಲಿ ಜರುಗುವುದು

ಶ್ರೀ ರಾಮಾನುಜಾಚಾರ್ಯರ ತಿರುನಕ್ಷತ್ರವಾದ ಮಾರನೆಯ ದಿವಸ ಇವರ ತಿರುನಕ್ಷತ್ರವು ನಡೆಯುವುದು. ಶ್ರೀ ತಿರುನಾರಾಯಣಸ್ವಾಮಿಯ ವರಿಗೂ ಅಷ್ಟೋತ್ತರವಾದ ಬಳಿಕ ಶ್ರೀ ರಾಮಾನುಜಾಚಾರ್ಯರಿಗೆ ಅಭಿಷೇ ಕವಾಗಿ, ಅಲಂಕಾರ, ತಿರುವಾರಾಧನೆ, ತಳಿಗೆ ನಿವೇದನ, ಶಾತ್ತುಮುರೈ, ತೀರ್ಥ ವಿನಿಯೋಗ ಮುಂತಾದುದು ಕ್ರಮವರಿತು ನಡೆಯುವುದು.

# ೮. ವಸಂತೋತ್ಸವವು.



ಈ ಉತ್ಸವವು ವೈಶಾಖ ಶುದ್ಧ ತ್ರಯೋದಶಿ, ಚತುರ್ದಶಿ ಮತ್ತು ಪೌರ್ಣಮಿಯಲ್ಲಿ ನಡೆಯುವುದು

ವೈಶಾಖ ಶುದ್ಧ ದಶಮಿ, ಏಕಾದಶಿಯಲ್ಲಿಯೂ ಸಹ (ಅಧಿಕ ಮಾಸ ಬಂದಾಗ ಚೈತ್ರ ಶುದ್ಧ ದಶಮಿಯಲ್ಲಿ) ರಾತ್ರಿ ಶ್ರೀ ತಿರುನಾರಾಯಣ ಸ್ವಾಮಿಯವರಿಗೆ ತೆರೆ ತೆಗೆದು ತಿರುವಾರಾಧನೆ, ಆರತಿ, ಸಹಸ್ರನಾಮವಾಗಿ, ನಂತರ ಹರಿದ್ರಾಚೂರ್ಣದಿಂದ ಅಭಿಷೇಕವಾಗಿ, ಗೋಷ್ಠಿಗೆ ತೀರ್ಥ ವಿನಿಯೋಗ ಮುಂತಾಗಿ ಜರುಗುವುದು. ದ್ವಾದಶಿಯ ದಿವಸ ರಾತ್ರಿ ನಿತ್ಯ ಕಟ್ಟಳೆಯು ನಡೆದ ನಂತರ ಮೇಲ್ಕಂಡ ಉತ್ಸವಕ್ಕೆ ಅಂಕುರಾರ್ಪಣ ಮತ್ತು ಯಾಗಶಾಲಾ ಹೋಮ ಮುಂತಾದುದು ನಡೆದು ಕ್ಷೀರಾನ್ನ ನಿವೇದನವಾಗುವುದು. ಇದರಂತೆ ತ್ರಯೋದಶಿ ಮತ್ತು ಚತುರ್ದಶಿಯಲ್ಲಿ ಸಹ ನಡೆಯುವುದು. ಮಧ್ಯಾಹ್ನಾತ್ಪರ ಶ್ರೀ ಚಲುವರಾಯಸ್ವಾಮಿಯವರು ಅರಮನೆಯ ತೋಟಕ್ಕೆ ಬಿಜಮಾಡಿ, ಉಭಯನಾಚ್ಯಾರಂಮನವರು ಇಬ್ಬರು ಪ್ರತ್ಯೇಕ ಪ್ರತ್ಯೇಕವಾಗಿ ಪಲ್ಲಕ್ಕಿಯಲ್ಲಿ ಬಿಜಮಾಡಿ, ಅವರು ಅರಮನೆಯ ತೋಟಕ್ಕೆ ದಯಮಾಡಿಸುವರು. ಅಲ್ಲಿ ತಿರುವಾರಾಧನೆ, ಆರತಿ ಪುಣ್ಯಾಹಾ ನಂತರ ತಳಿಗೆ ನಿವೇದನವಾಗಿ, ಶ್ರೀ ಸೂಕ್ತದಿಂದ ಹರಿದ್ರಾ ಚೂರ್ಣಾಭಿಷೇಕವಾಗಿ, ಗೋಷ್ಠಿಗೆ ತೀರ್ಥವಿನಿಯೋಗವಾಗುತ್ತದೆ ನಂತರ ಶ್ರೀ ಚಲುವರಾಯಸ್ವಾಮಿಯವರೂ ಶ್ರೀ ಅಮ್ಮನವರೂ ಪ್ರತ್ಯೇಕವಾಗಿ ಹೊರಟು ಆಸ್ಥಾನಕ್ಕೆ ದಯಮಾಡಿಸುತ್ತಾರೆ.

ಪೌರ್ಣಮಿಯ ದಿವಸ ಮಧ್ಯಾಹ್ನ ವಸಂತೋತ್ಸವದ ತೋಟಕ್ಕೆ ಶ್ರೀ ಚಲುವರಾಯಸ್ವಾಮಿಯವರು, ಮತ್ತು ಉಭಯನಾಚ್ಯಾರಂಮನವರು, ಶ್ರೀ ಭಾಷ್ಯಕಾರರ ಸಮೇತ ಬಿಜಮಾಡಿ, ಅಲ್ಲಿ ತಿರುವಾರಾಧನೆ,

ಆರತಿಯಾಗಿ, ಪುಣ್ಯಾಹಾನಂತರ ಶ್ರೀ ಸೂಕ್ತಪಾರಾಯಣದಿಂದ ಚೂರ್ಣಾಭಿಷೇಕವಾಗುವುದು. ತರುವಾಯ ಗೋಷ್ಠಿಗೆ ವಸಂತಪ್ರೋಕ್ಷಣೆಯಾಗಿ, ಒಳಗುಡಿಯ ಕಾವಲುಗಾರರಿಗೆ ಉಳಿದ ವಸಂತದಿಂದ ಸ್ನಾನಮಾಡಿಸುವರು. ಆಮೇಲೆ ಶ್ರೀ ಉತ್ಸವರು ಶ್ರೀ ಭಾಷ್ಯಕಾರರ ದೇವಸ್ಥಾನಕ್ಕೆ ದಯ ಮಾಡಿದ ನಂತರ, ಆಳ್ವಾರ್ ಸನ್ನಿಧಿಗೆ ಬಿಜಮಾಡಿ, ಅಲ್ಲಿ ತಿರುವಾರಾಧನೆ, ಆರತಿ, ನಿವೇದನ, ವಿನಿಯೋಗವಾದ ನಂತರ, ಕೋಡೈತಿರುನಾಳಿನಂತೆ ಮುಂದಣ ಉತ್ಸವವು ನಡೆಯುವುದು.

## ೯. ಶ್ರೀ ಮಧುರಕವಿಯಾಳ್ವಾರವರ ತಿರುನಕ್ಷತ್ರವು.

---

ಇದು ಮೇಷ ಮಾಸ ಚಿತ್ತಾ ನಕ್ಷತ್ರದಲ್ಲಿ ಇತರ ಆಳ್ವಾರುಗಳ ತಿರುನಕ್ಷತ್ರದ ಕಟ್ಟಲೆಯಂತೆ ನಡೆಯುವುದು.

ಇವರು ಮೇಷ ಮಾಸ ಚಿತ್ತಾ ನಕ್ಷತ್ರದಲ್ಲಿ ಕುಮುದಾಂಶ ಸಂಭೂತರಾಗಿ, ತಿರುಕ್ಕೋಳೂರು ಕ್ಷೇತ್ರದಲ್ಲಿ ಅವತರಿಸಿದರು. ಇವರು ನಮ್ಮಾಳ್ವಾರರ ಶಿಷ್ಯರು.

---

## ೧೦. ಎ. ಶ್ರೀ ಆನಂದಾಳ್ವಾರವರ ತಿರುನಕ್ಷತ್ರವು.



ಇದು ಮೇಷಮಾಸ ಚಿತ್ತಾನಕ್ಷತ್ರದಲ್ಲಿ ಶ್ರೀ ಮೊದಲಿಯಾಣ್ಡಾನ್ ರವರ ತಿರುನಕ್ಷತ್ರದ ಕಟ್ಟಲೆಯಂತೆ ನಡೆಯುವುದು.

## ೧೦. ಬಿ. ತಿರುಕ್ಕಚ್ಚಿನಂಬಿಯವರ ತಿರುನಕ್ಷತ್ರವು.



ಇದು ಕುಂಭ ಮಾಸ ಮೃಗಶಿರ ನಕ್ಷತ್ರದಲ್ಲಿ ನಡೆಯುವುದು.

ತಿರುನಕ್ಷತ್ರದ ಪೂರ್ವದಿವಸ ತೊಡಕವಾಗಿ, ಮಾರನೆಯ ದಿವಸ ಅಭಿಷೇಕ ನಡೆದು, ಶ್ರೀ ತಿರುನಾರಾಯಣಸ್ವಾಮಿಯವರ ಸನ್ನಿಧಿಯಲ್ಲಿ ಶಾತ್ತುಮುರೈಯಾದನಂತರ, ದೇವಸ್ಥಾನದ ಪ್ರದಕ್ಷಿಣೆಯಿಂದ **ಶ್ರೀಯವರ** ಸನ್ನಿಧಿಗೆ ದಯಮಾಡಿ, ಶ್ರೀ ಶಠಾರಿ, ಪರಿವಟ್ಟ, ಮಾಲೆ, ಅಭಯಹಸ್ತ ಮುಂತಾದ ಮರ್ಯಾದೆಗಳು ನಡೆದು ಶಾತ್ತುಮುರೈ, ತಳಿಗೆ ನಿವೇದನ, ವಿನಿಯೋಗ ಮುಂತಾದುವು ಸಹ ನಡೆಯುವುದು. ಇದರಂತೆ ಹನ್ನೆರಡು ಆಳ್ವಾರುಗಳ ತಿರುನಕ್ಷತ್ರಗಳೂ ನಡೆಯುವುವು

---

## ೧೧. ಶ್ರೀ ನಮ್ಮಾಳ್ವಾರ್ ತಿರುನಕ್ಷತ್ರವು,



ಇದು ವೃಷಭಮಾಸ ಆರಿದ್ರಾ ನಕ್ಷತ್ರದಿಂದ ವಿಶಾಖೆಯವರೆಗೆ ನಡೆಯುವುದು

ಶ್ರೀ ವೇದಾಂತ ದೇಶಿಕರವರ ತಿರುನಕ್ಷತ್ರದಂತೆ ತೊಡಕವು ನಡೆದು ಸಾಯಂಕಾಲದಲ್ಲಿ ಶ್ರೀ ಆಳ್ವಾರವರು ಶ್ರೀಯವರ ಸನ್ನಿಧಿಯ ಬಾಗಿಲಿಗೆ ದಯಮಾಡಿ, ಅಲ್ಲಿ ತಿರುವಾರಾಧನೆ, ನಿವೇದನ, ರಾಮಾನುಜಸೂತ್ತುಂದಾದಿ ಶಾತ್ತುಮುರೈಯಿಂದ, ಶ್ರೀ ಆಳ್ವಾರವರ ಸನ್ನಿಧಿಗೆ ದಯಮಾಡುವರು. ಅಲ್ಲಿ ಆರಾಧನೆ, ಆರತಿ, ಶಾತ್ತುಮುರೈ ಸೇವಾಕಾಲ ಮುಂತಾಗಿ ಕ್ರಮವರಿತು ನಡೆಯುವುದು.

ಇವರು ಪರಾಂಕುಶರ್ ಎಂಬ ಹೆಸರಿನಿಂದ ವೃಷಭ ಮಾಸ, ವಿಶಾಖಾ ನಕ್ಷತ್ರದಲ್ಲಿ ಅಯೋನಿಜರಾಗಿಯೂ ಸೇನೇಶಾಂಶರಾಗಿಯೂ ಕುರುಕಾಪುರಿ ಎಂಬ ಸ್ಥಳದಲ್ಲಿ ಅವತರಿಸಿದರು

## ೧೧. ಹನುಮಜಯಂತಿಯು.



ಇದು ವೃಷಭಮಾಸ ಪೌರ್ಣಿಮಾದಲ್ಲಿ ನಡೆಯುವುದು.

ಶ್ರೀ ನರಸಿಹ್ಮ ಜಯಂತಿಯಾದ ಮಾರನೆಯ ದಿವಸ ಶ್ರೀ ಉತ್ಸವರಿಗೆ ಹನುಮಂತ ವಾಹನದಮೇಲೆ ಉತ್ಸವವು ನಡೆದು, ಆಸ್ಥಾನಕ್ಕೆ ಬಿಜಮಾಡಿಸುವರು.

## ೧೩. ಪಲ್ಲವೋತ್ಸವವು.



ಇದು ವೃಷಭ ಮಾಸ ಶ್ರವಣ ನಕ್ಷತ್ರದಿಂದ ರೇವತಿಯುವರೆಗೆ ೭ ದಿವಸ ನಡೆಯುವುದು.

ಮೊದಲನೆಯ ದಿವಸ ಅಂಕುರಾರ್ಪಣವು ನಡೆಯುವುದು. ನಂತರ ಏಳು ದಿನಗಳವರೆಗೆ ನಿತ್ಯಕಟ್ಟಲೆ ನಡೆದ ತರುವಾಯ ಶ್ರೀ ರಾಮಾನುಜಾಚಾರ್ಯರ ಸನ್ನಿಧಿಗೆ ಶ್ರೀ ಉತ್ಸವರು ಬಿಜಮಾಡಿ ಅಲ್ಲಿ ಪುಣ್ಯಾಹ ಪೂರ್ವಕ ಅಭಿಷೇಕವು ನಡೆದು ನಂತರ ಶಯ್ಯಾಸನದ ತಳಿಗೆ ನಿವೇದನವು ಜರುಗುವುದು. ಆ ಮೇಲೆ ಶ್ರೀಯುವರಿಗೆ ವಾಹನೋತ್ಸವವೂ, ತಿರುವಾರಾಧನೆ, ಆರತಿ, ಶಾತ್ತುಮುರೈ ಆದ ಬಳಿಕ ಧ್ವಜಪೀಠದ ಬಳಿ ಕರಗ ತಿರುವಾರಾಧನೆಯೂ, ತಿರುಪಾಯ್‌ಮುಳಿ ಶಾತ್ತುಮುರೈಯೂ, ಆರತಿ ಮುಂತಾಗಿ ನಡೆದು, ಆಸ್ಥಾನಕ್ಕೆ ಬಿಜಮಾಡಿಸುವರು.

# ೧೪. ಸಾರ್ವೈಕಾದಶೀ ಉತ್ಸವವು.



ಇದು ಜೇಷ್ಠ ಬಹುಳ ಏಕಾದಶಿಯು ಮೊದಲು ತ್ರಯೋದಶಿಯು ವರೆಗೆ ಮೂರು ದಿವಸಗಳು ನಡೆಯುವುದು. ರಾತ್ರಿ ಶ್ರೀತಿರುನಾರಾಯಣ ಸ್ವಾಮಿಯವರ ಸನ್ನಿಧಿಯಲ್ಲಿ ಸಹಸ್ರನಾಮವಾದನಂತರ, ಶ್ರೀಯವರ ಮುಂಭಾಗದಲ್ಲಿ ಉಯ್ಯಾಲೆಯನ್ನು ಕಟ್ಟಿ, ಅದರಲ್ಲಿ ಶ್ರೀ ಚಲುವರಾಯ ಸ್ವಾಮಿಯವರನ್ನು ಉಭಯ ನಾಚ್ಯಾರ್‌ಗಳೊಡನೆ ಬಿಜಮಾಡಿಸಿ, ತಿರ್ವಾರಾಧನೆ, ಆರತಿ, ನಿವೇದನವಾಗುವುದು. ತರುವಾಯ ಪುರುಷಸೂಕ್ತ ಪಠಣವಾಗಿ, ಕರಗತಿರುವಾರಧನೆ, ಆರತಿ, ಅರುಳಪ್ಪಾಡು, ಪರಿವಟ್ಟ, ಮಾಲೆ, ತೀರ್ಥವಿನಿಯೋಗವು, ಕ್ರಮವರಿತು ನಡೆಯುವುದು.

# ೧೫. ದೊಡ್ಡ ಉಯ್ಯಾಲೆಯ ಉತ್ಸವವು.



ಇದು ಆಷಾಢ ಶುದ್ಧ ಏಕಾದಶಿಯಿಂದ ಪೌರ್ಣಮಿಯವರೆಗೆ ಐದು ದಿನಗಳು ನಡೆಯುವುದು.

ಏಕಾದಶೀ ತಿಥಿಗೆ ಪೂರ್ವಭಾವಿಯಾದ ದಶಮಿಯ ದಿವಸ ರಾತ್ರಿ ನಿತ್ಯ ಕಟ್ಟಲೆಯಾದ ನಂತರ ಡೋಲೋತ್ಸವಕ್ಕೆ ಆಗಮೋಕ್ತವಾಗಿ ಸಭಾನುಜ್ಞೆ, ಕರ್ಮಾಂಗಸ್ನಪನ, ಮೃತ್ತಿಕಾಸಂಗ್ರಹಣ, ಯಾಗ ಶಾಲೆಯಲ್ಲಿ ಹೋಮ, ಅಂಕುರಾರ್ಪಣ, ಶಯ್ಯಾಸನ ಮುಂತಾದುದು ನಡೆಯುವುದು.

ಏಕಾದಶೀ ದಿವಸ ಹಗಲು ಸಹಸ್ರನಾಮ, ಅಷ್ಟೋತ್ತರ, ನಡೆದ ನಂತರ ಶ್ರೀ ಚಲುವರಾಯಸ್ವಾಮಿ, ಉಭಯನಾಚ್ಯಾರ್, ಮತ್ತು

ಶ್ರೀ ರಾಮಾನುಜಾಚಾರ್ಯರಿಗೆ ಸಹ ಪಂಚಾಮೃತಾಭಿಷೇಕವಾಗಿ, ಶ್ರೀಯವರಿಗೆ ಅಲಂಕಾರವಾದ ಬಳಿಕ ನಿತ್ಯ ಕಟ್ಟಲೆ, ಹೆಚ್ಚು ಕಟ್ಟಲೆ ನಿವೇದನ ತೀರ್ಥಮರ್ಯಾದೆ ಮುಂತಾಗಿ ನಡೆಯುವುದು.

ರಾತ್ರಿ ನಿತ್ಯಕಟ್ಟಲೆಯ ಹೋಮ, ಬಲಿ ಮುಂತಾದುವು ಆದ ನಂತರ ಶ್ರೀಯವರು ಉಭಯನಾಚ್ಯಾರ್ ಮತ್ತು ಶ್ರೀ ಭಾಷ್ಯಕಾರರ ಸಮೇತ ವಾಹನದ ಮಂಟಪದಲ್ಲಿ ಸಿದ್ಧ ಪಡಿಸಿರುವ ಉಯ್ಯಾಲೆಯಲ್ಲಿ ಬಿಜಮಾಡಿಸಿ, ಅಲಂಕಾರ, ತಿರುವಾರಾಧನೆ, ಮುಂತಾಗಿ ನಡೆದು ಶ್ರೀಯವರಿಗೆ ಡೋಲೋತ್ಸವದ ಕಟ್ಟಲೆ ತಳಿಗೆ ನಿವೇದನವಾಗಿ, ವೇದಘೋಷ, ಪುನಃ ಕರಗತಿರುವಾರಾಧನೆ, ತಾಂಬೂಲ ನಿವೇದನ, ಮತ್ತು ಆರತಿ ಸಮರ್ಪಣೆಯಿಂದ, ಕಟ್ಟಲೆಯಂತೆ ಅರುಳಪ್ಪಾಡು, ತೀರ್ಥ ವಿನಿಯೋಗ ಮುಂತಾಗಿ ನಡೆಯುವುದು.

ಇದೇ ರೀತಿಯಲ್ಲಿ ಉಳಿದ ನಾಲ್ಕು ದಿವಸಗಳು ಉತ್ಸವವೂ ಬಹಳ ವಿಜೃಂಭಣೆಯಿಂದ ಜರುಗುವುದು.

## ೧೬. ಚಾತುರ್ಮಾಸ್ಯ ಸಂಕಲ್ಪವು.



ಇದು ಆಷಾಢ ಶುದ್ಧ ಪೌರ್ಣಮಿಯಲ್ಲಿ ಬರುತ್ತದೆ.

ಈ ದಿವಸ ಶ್ರೀಯವರ ದೇವಸ್ಥಾನದಿಂದ ಶ್ರೀ ಬ್ರಹ್ಮತಂತ್ರ ಪರಕಾಲ ಸ್ವಾಮಿಗಳವರ ಮಠಕ್ಕೆ ಪದ್ಧತಿಯಂತೆ, ಚಾತುರ್ಮಾಸ್ಯದ ಸಂಕಲ್ಪದ ದಿನಸಿ, ಮುಂತಾದ ಮರ್ಯಾದೆಯು ಕಳುಹಿಸಲ್ಪಡುವುದು.

ಸ್ಥಳದಲ್ಲಿ ಇತರ ಯತಿಗಳು ಇದ್ದುದಲ್ಲಿ ಯಥೋಚಿತವಾದ ಮರ್ಯಾದೆಗಳು ನಡೆಸಲ್ಪಡುವುದು

## ೧೭. ಶ್ರೀ ಚಕ್ರತ್ತಾಳ್ವಾರ್ ತಿರುನಕ್ಷತ್ರವು.

ಇದು ಕಟಕ ಮಾಸ ಚಿತ್ತಾ ನಕ್ಷತ್ರದಲ್ಲಿ ನಡೆಯುವುದು.

ಇತರ ಆಳ್ವಾರುಗಳ ತಿರುನಕ್ಷತ್ರದ ಕಟ್ಟಳೆಯಂತೆ ಜರುಗುವುದು.

## ೧೮. ಶ್ರೀ ಕೃಷ್ಣರಾಜ ತಿರುನಾಳ್.



ಇದು ಆಷಾಢ ಬಹುಳದಲ್ಲಿ ಉತ್ತರಾಷಾಢ ನಕ್ಷತ್ರದಿಂದ ರೋಹಿಣಿಯವರೆಗೆ ನಡೆಯುವುದು.

ಆಷಾಢ ಬಹುಳ ಬಿದಿಗೆಯ ದಿವಸ ಶ್ರೀ ಕೃಷ್ಣರಾಜ ಒಡೆಯರವರ ವರ್ಧಂತಿಪ್ರಯುಕ್ತ ಶ್ರೀ ತಿರುನಾರಾಯಣ ಸ್ವಾಮಿಯವರಿಗೂ, ಶ್ರೀ ಚಲುವರಾಯಸ್ವಾಮಿಯವರಿಗೂ, ಶ್ರೀ ಯದುಗಿರಿಯಮ್ಮನವರಿಗೂ, ಶ್ರೀ ಯೋಗಾನೃಸಿಹ್ಮಸ್ವಾಮಿಯವರಿಗೂ ಮಹಾಭಿಷೇಕವು, ಶ್ರೀ ನೃಸಿಹ್ಮ ಜಯಂತಿಯ ಕಟ್ಟಳೆಯಂತೆ ನಡೆಯುವುದು ನಂತರ ಶ್ರೀಯವರುಗಳಿಗೆ ಅಲಂಕಾರವಾದ ಬಳಿಕ ಶ್ರೀ ತಿರುನಾರಾಯಣಸ್ವಾಮಿಯವರ ನವರಂಗ ದಲ್ಲಿ ಶ್ರೀ ಚಲುವರಾಯಸ್ವಾಮಿಯವರು, ಶ್ರೀ ಕಲ್ಯಾಣಮ್ಮನವರು ಸಹ ಬಿಜಮಾಡಿಸಿ, ವರ್ಧಂತಿಕಟ್ಟಳೆ, ನಿವೇದನ, ಆರತಿ ಮುಂತಾದುದು ನಡೆದು ಪದ್ಧತಿಯಂತೆ ಅರುಳಪ್ಪಾಡಾಗಿ, ಶ್ರೀಯವರ ಸನ್ನಿಧಿಯಿಂದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ ಭಕ್ತ ವಿಗ್ರಹದ ಸನ್ನಿಧಿಗೆ, ಶ್ರೀ ಶಠಾರಿ, ತೀರ್ಥ, ಪರಿವಟ್ಟ, ಮಾಲೆ, ಅಭಯಹಸ್ತ, ನಾಮದ

ಉಂಡೆ ಮುಂತಾದ ಪ್ರಸಾದಗಳನ್ನು ದೇವಸ್ಥಾನದ ಸಮಸ್ತ ವಾದ್ಯ ಬಿರುದಾವಳಿಗಳೊಂದಿಗೆ ಒಳಪ್ರಾಕಾರದ ಪ್ರದಕ್ಷಿಣೆಯಿಂದ ಮೇಲ್ಕಂಡ ಸನ್ನಿಧಿಗೆ ಬಿಜಮಾಡಿಸಿಕೊಂಡು ಬಂದು ಶ್ರೀ ಪ್ರಭುಗಳವರಿಗೆ ಕ್ರಮ ಪ್ರಕಾರ ಮರ್ಯಾದೆ ವಗೈರೆ ಒಪ್ಪಿಸುವರು. ಆಮೇಲೆ ಗೋಷ್ಠಿಗೆ ತೀರ್ಥ ವಿನಿಯೋಗ ಮುಂತಾಗಿ ನಡೆಯುವುದು. ತರುವಾಯ ಶ್ರೀ ಕಲ್ಯಾಣಮ್ಮ ನವರು ಧಾರಾಮಹೋತ್ಸವದ ಪ್ರಯುಕ್ತ, ತಿರುಕ್ಕಲ್ಯಾಣಿಯ ಸಮೀಪ ದಲ್ಲಿರುವ ಧಾರಾಮಂಟಪಕ್ಕೆ ಸಮಸ್ತ ವಾದ್ಯ ಬಿರುದಾವಳಿಗಳೊಂದಿಗೆ ದಯಮಾಡಿಸುವರು. ಶ್ರೀ ರಾಮಾನುಜಾಚಾರ್ಯರ ಸಮೇತ ಧಾರಾ ಮಂಟಪಕ್ಕೆ ದಯಮಾಡಿಸಿ, ಶ್ರೀಯವರಿಗೂ, ಶ್ರೀ ಅಮ್ಮನವರಿಗೂ, ಸಹ ಎದುರು ಬದರಾಗಿ ಸಂಬಂಧಮಾಲೆಯು ಸಮರ್ಪಣೆಯಾದ ನಂತರ ಶ್ರೀಯವರಿಗೂ, ಶ್ರೀಅಮ್ಮನವರಿಗೂ ಸಹ ಡೋಲೋತ್ಸವ ಮುಂತಾಗಿ ನಡೆದು, ಧಾರಾಮಂಟಪದ ಆಸ್ಥಾನದಲ್ಲಿ ಬಿಜಮಾಡಿಸಿ, ಧಾರಾಪ್ರಯು ಕ್ತ ಶಾಸ್ತ್ರೋಕ್ತವಾಗಿ ಹೋಮ ಮುಂತಾದುದು ನಡೆಯುವುದು. ಈ ಸನ್ನಿವೇಶದಲ್ಲಿ ಶ್ರೀ ರುಕ್ಮಿಣೀಕಲ್ಯಾಣದ ಪಾರಾಯಣವು ನಡೆ ಯುವುದು. ಆಮೇಲೆ ಅಲಂಕಾರ, ತಿರುವಾರಾಧನೆ, ಮಧುಪರ್ಕ, ನಿವೇದನ ಮುಂತಾದುದು ನಡೆದು, ಶ್ರೀಯವರ ಪ್ರವರ, ಮುಹೂರ್ತ ಮುಂತಾಗಿ ವಿಧಿವತ್ತಾಗಿ ಜರುಗಿದ ನಂತರ ಮಠಮರ್ಯಾದೆ, ರಾಜಮರ್ಯಾದೆ ಗಳು ಕ್ರಮವರಿತು ನಡೆಯುವುವು. ನಂತರ ಆಗಮಿಕರು ಸ್ಥಾನೀಕರಿಂದ ಕರಗ ಬಿಡಿಸಿಕೊಂಡು, ಸುವರ್ಣಾಕ್ಷತ ಪೂರ್ವಕವಾಗಿ, ಶ್ರೀಯವರಿಗೂ, ಶ್ರೀಅಮ್ಮನವರಿಗೂ ವಿಧಿವತ್ತಾಗಿ ಧಾರಾಮಂತ್ರವನ್ನುಚ್ಚರಿಸಿ, ಧಾರಾ ಮುಹೂರ್ತವು ನಡೆಯುವುದು. ತರುವಾಯ ಲಾಜ ಹೋಮದ ಪ್ರಯುಕ್ತ ಶ್ರೀಯವರು ಮತ್ತು ಶ್ರೀ ಅಮ್ಮನವರು ಸಹ ಅಗ್ನಿ ಪ್ರದಕ್ಷಿಣೆಯಿಂದ, ಲಾಜ ಹೋಮವಾದನಂತರ ಪೂರ್ಣಾಹುತಿ, ಪ್ರಾಯಶ್ಚಿತ್ತಾಹುತಿ ಆಶೀ ರ್ವಾದ, ಅಕ್ಷತೆ, ಸ್ವಸ್ತಿವಾಚನ, ಫಲತಾಂಬೂಲ ನಿವೇದನ, ವಿನಿ ಯೋಗ ಮುಂತಾದುದು ನಡೆದು, ಧಾರಾಕಟ್ಟೆಲೆಯ ತಳಿಗೆ ನಿವೇದನ ವಾಗಿ ಗೋಷ್ಠಿಗೆ ಪದ್ಧತಿಯಂತೆ ಪರಿವಟ್ಟ, ಮಾಲೆ, ತೀರ್ಥವಿನಿಯೋಗ ಮುಂತಾದುದು ನಡೆಯುವುದು. ನಂತರ ಶ್ರೀಯವರು, ಅವರ ಹಿಂಭಾಗ

ದಲ್ಲಿ ಶ್ರೀ ಉಭಯನಾಚ್ಯಾರಮ್ಮನವರು, ಅವರ ಹಿಂಭಾಗದಲ್ಲಿ ಶ್ರೀ ಯತೀಂದ್ರರು ಹೊರಟು ದೇವಸ್ಥಾನಕ್ಕೆ ದಯಮಾಡಿಸಿ, ಭಕ್ತ ವಿಗ್ರಹದ ಸನ್ನಿಧಿಯ ಬಾಗಿಲಿನಲ್ಲಿ ಶ್ರೀಯವರುಗಳಿಗೆ ಕರ್ಪೂರಾರತಿ, ಖಾಸಾ ಸನ್ನಿಧಿಯಲ್ಲಿ ಆರತಿಯನ್ನು ಒಪ್ಪಿಸಿದ ನಂತರ ಶ್ರೀಯವರು ಆಸ್ಥಾನಕ್ಕೆ ಹಿಂತಿರುಗುವರು. ಧಾರಾಮಹೋತ್ಸವದಲ್ಲಿ ಧಾರಣೆಯಾಗಿದ್ದ ಸಂಭಂಧ ಮಾಲಿಕೆಗಳನ್ನು ಶ್ರೀ ಮಹಾಪ್ರಭುಗಳವರಿಗಾಗಲಿ, ಅಥವಾ ಆಸ್ಥಾನ ಮಂಟಪದಲ್ಲಿ ಹಾಜರಿರುವ ಮುಜರೈ ಆಫೀಸರವರಿಗಾಗಲಿ, ಮರ್ಯಾದೆಯ ಪೂರ್ವಕವಾಗಿ ಕೊಡುವರು.

ಧಾರಾ ಮೊಹೋತ್ಸವವಾದ ನಾಲ್ಕನೆಯ ದಿವಸ ಶ್ರೀಯವರಿಗೆ ಹಗಲು ನಿತ್ಯಕಟ್ಟಲೆಯಾದ ನಂತರ, ಶ್ರೀಯವರಿಗೂ, ಮತ್ತು ಶ್ರೀ ಕಲ್ಯಾಣಮ್ಮನವರಿಗೂ ಸಹ ಬೇರೆ ಬೇರೆಯಾಗಿ ನಾಗವಲ್ಲಿ ಉತ್ಸವದ ಪ್ರಯುಕ್ತ, ಪಂಚಾಮೃತಸ್ನಪನ, ಮುಂತಾಗಿ ನಡೆದು, ಶ್ರೀಯವರನ್ನೂ ಶ್ರೀ ಅಮ್ಮನವರನ್ನೂ ಸಹ, ಬಂಗಾರದ ಪಲ್ಲಕ್ಕಿಯಲ್ಲಿ ಅಭಿಮುಖವಾಗಿ ಬಿಜಮಾಡಿಸಿ, ಅಲಂಕಾರ ಮುಂತಾದುದು ನಡೆದು, ತರುವಾಯ ಶ್ರೀಮದಾಚಾರ್ಯರ ಸಮೇತ ಧಾರಾಮಂಟಪಕ್ಕೆ ಬಿಜಮೊಡಿಸಿ, ಶೇಷಹೋಮ ಮುಂತಾದುದು ನಡೆದು, ಧಾರಾಮೊಹೋತ್ಸವದ ಮೇರೆಗೆ ಆಶೀರ್ವಾದ, ಅಕ್ಷತೆ ಮುಂತಾದುದು ಕ್ರಮಃವರಿತು ನಡೆಯುವುದು.

## ಶ್ರೀ ಕೃಷ್ಣರಾಜ ತಿರುನಾಳ್.



ಆಷಾಢ ಬಹುಳದಲ್ಲಿ ರೋಹಿಣಿ ನಕ್ಷತ್ರದ ೧೦ ಘಳಿಗೆಯ ಮುಹುರ್ತವಿರುವ ದಿವಸಕ್ಕೆ ರಪ್ಪೂಭಾವಿ, ಹನ್ನೊಂದನೆಯ ದಿವಸದಲ್ಲಿ ಶ್ರೀಯವರಿಗೆ ನಿತ್ಯಕಟ್ಟಲೆಯಾದ ನಂತರ, ಅಂಕುರಾರ್ಪಣದ ಪ್ರಯುಕ್ತ ಶ್ರೀಯವರಿಗೂ ವಿಶ್ವಕ್ಸೇನರಿಗೂ, ಪದ್ಧತಿಯಂತೆ ಪಂಚಾಮೃತ ಸ್ನಪನವು ನಡೆದು,

ಅಲಂಕಾರ ಮುಂತಾದುದು ಜರುಗಿ, ರಾತ್ರಿ ನಿತ್ಯಕಟ್ಟಳೆಯಾದ ನಂತರ, ಶ್ರೀ ಕೃಷ್ಣರಾಜ ತಿರುನಾಳ್ ಮಹೋತ್ಸವಕ್ಕೆ ಸಭಾನುಜ್ಞೆ, ಪುಣ್ಯಾಹ, ವಿಷ್ವಕ್ಸೇನ ಪೂಜೆ, ಶರೀರಶುದ್ಧಿ, ಮುಂತಾಗಿ ನಡೆದು, ಶ್ರೀ ಸ್ನಪನ ಮೂರ್ತಿ ಮೂಲವರ ಸನ್ನಿಧಿಯಲ್ಲಿ ಪಂಚಾಮೃತ ಸ್ನಪನವು ನಡೆದು, ಅಂಕುರಾರ್ಪಣದ ತಳಿಗೆ ನಿವೇದನವಾಗಿ ಜಿತಂತಾಸ್ತೋತ್ರ ಪಾರಾಯಣ ದಿಂದ, ಗೋಷ್ಠಿಗೆ ಶ್ರೀ ಶಠಾರಿಯನ್ನು ಬಿಜಮಾಡಿಸಿ, ಅಲ್ಲಿ ಶ್ರೀಮಠ ಮುಂತಾಗಿ ಆಚಾರ್ಯಪುರುಷರುಗಳಿಗೂ, ಶ್ರೀಮತ್ ಮಹಾಪ್ರಭುಗಳವರ ವಂಶೀಕರುಗಳೆಲ್ಲರಿಗೂ, ಮಾಮೂಲು ಮೇರೆ ಮರ್ಯಾದೆಗಳು ನಡೆದ ತರುವಾಯ, ಶ್ರೀ ಭಕ್ತ ವಿಗ್ರಹಸನ್ನಿಧಿಗೂ ಸಹ ಮರ್ಯಾದೆಯನ್ನೊ ಪ್ಪಿಸುವರು ನಂತರ ವಿಧಿಪ್ರಕಾರ ಶ್ರೀ ವಿಷ್ವಕ್ಸೇನರನ್ನು ಸ್ಥಾನೀ ಕರ ಮಂಟಪಕ್ಕೆ ಬಿಜಮಾಡಿಸಿ, ಅಲ್ಲಿರುವ ಬೃಂದಾವನದಲ್ಲಿ ಶಾಸ್ತ್ರೋಕ್ತ ರೀತಿಯಲ್ಲಿ ಮೃತ್ತಿಕಾ ಸಂಗ್ರಹಣ ಮಾಡಿಕೊಂಡು ಸ್ವಸ್ತಿವಾಚನದೊಂ ದಿಗೆ ದೇವಸ್ಥಾನಕ್ಕೆ ಬಿಜಮಾಡಿಸುವರು, ತರುವಾಯ ಅಂಕುರಾರ್ಪಣ ಪ್ರಯುಕ್ತ ಹೋಮ ಮುಂತಾದುದು ನಡೆದು ಶಯ್ಯಾಸನದ ತಳಿಗೆ ನಿವೇದನ ಮುಂತಾಗಿ ನಡೆಯುವುದು.

ಮಾರನೆಯ ದಿವಸ ಅಧಿವಾಸರದ ಪ್ರಯುಕ್ತ ಶ್ರೀ ವಿಷ್ವಕ್ಸೇನ ರನ್ನೂ ಗರುಡಪಟವನ್ನೂ ಸಹ ಪಲ್ಲಕ್ಕಿಯಲ್ಲಿ ಬಿಜಮಾಡಿಸಿಕೊಂಡು, ಗ್ರಾಮ ಪ್ರದಕ್ಷಿಣೆಯಾಗಿ, ದೇವಸ್ಥಾನಕ್ಕೆ ಬಿಜಮಾಡಿಸಿ, ಕರಗ ತಿರುವಾರಾಧನೆ ಮುಂತಾದುದು ನಡೆಯುವುದು. ಆ ಮೇಲೆ ಗರುಡಪಟವನ್ನು ನವರಂಗ ದಲ್ಲಿ ಶ್ರೀ ತಿರುನಾರಾಯಣ ಸ್ವಾಮಿಯವರಿಗೆ ಅಭಿಮುಖವಾಗಿ ಕಟ್ಟಿ ಲಿ ತಿರುವಾರಾಧನೆ ತಳಿಗೆ ನಿವೇದನ ಮುಂತಾದುದು ನಡೆದನಂತರ ಮ ಹೋತ್ಸವದ ಪ್ರಯುಕ್ತ, ಶ್ರೀಯವರುಗಳಿಗೂ, ಮತ್ತು ಕೈಂಕರ್ಯ ಪರರಿಗೂ, ರಕ್ಷಾಬಂಧನವು ಜರುಗುವುದು.



# ಒಂದನೆಯ ತಿರುನಾಳ್. ಧ್ವಜಾರೋಹಣವು.



ಹಗಲು ನಿತ್ಯಕಟ್ಟಲೆ, ಶಾತ್ತುಮುರ್ರೈಯ್ಯಾದ ನಂತರ, ಶ್ರೀ ಉತ್ಸವರನ್ನು ಸಮರಭೂಪಾಲವಾಹನದಲ್ಲಿ ಬಿಜಮಾಡಿಸಿ, ಬಲಿಪ್ರಧಾನದಿಂದ ಶ್ರೀಯವರು ಧ್ವಜಪಟ ಸಹಿತ ಗ್ರಾಮ ಪ್ರದಕ್ಷಿಣೆಯಿಂದ ಆಸ್ಥಾನಕ್ಕೆ ಹಿಂತಿರುಗುವರು ಇದರಂತೆ ಶ್ರೀಮದಾಚಾರ್ಯರ ಸನ್ನಿಧಿಯಲ್ಲಿಯೂ ಇಯಲ್ ಶಾತ್ತುಮುರ್ರೈ ನಡೆಯುವುದು. ತರುವಾಯ ಧ್ವಜಸ್ತಂಭದಲ್ಲಿ ಧ್ವಜಪಟವನ್ನು ಕಟ್ಟಿ ಧ್ವಜಾರೋಹಣದ ಪ್ರಯುಕ್ತ, ಯಾಗಶಾಲೆಯಲ್ಲಿ ಹೋಮ, ಪೂರ್ಣಾಹುತಿ ಮುಂತಾದುದು ನಡೆದು, ಮಹಾಕುಂಭಪ್ರೋಕ್ಷಣೆಯು ಜರುಗುವುದು. ಆ ಮೇಲೆ ಮುಹೂರ್ತ, ಮಠಮರ್ರ್ಯಾದೆ ರಾಜಮರ್ರ್ಯಾದೆ, ಮುಂತಾಗಿ ನಡೆದ ತರುವಾಯ ಧ್ವಜಾರೋಹಣವು ಶಾಸ್ತ್ರರೀತಿಯಲ್ಲಿ ನಡೆಯುವುದು.

ಮಧ್ಯಾಹ್ನ ಶ್ರೀಯವರು ಕಲ್ಯಾಣಿಯ ಬಳಿ ಇರುವ ಶ್ರೀ ಕೃಷ್ಣರಾಜ ಒಡೆಯರವರ ಮಂಟಪ ಅಂದರೆ ಭುವನೇಶ್ವರೀ ಮಂಟಪಕ್ಕೆ ದಯಮಾಡಿಸಿ, ವಸಂತೋದ್ಯಾನ ಮಂಟಪದಲ್ಲಿ ನಡೆಯುವ ಮೇರೆಗೆ ತಿರುವಾರಾಧನೆ, ತಳಿಗೆ ನಿವೇದನ ಅರುಳಪ್ಪಾಡು, ಪರಿವಟ್ಟ, ಮಾಲೆ, ತೀರ್ಥವಿನಿಯೋಗ ಮುಂತಾಗಿ ನಡೆಯುವುದು.

ರಾತ್ರಿ ನಿತ್ಯಕಟ್ಟಲೆ ಯಾದನಂತರ ಭೇರೀ ತಾಡನ ಮುಂತಾಗಿ ನಡೆದು ಹಂಸವಾಹನೋತ್ಸವವು ಜರುಗುವುದು. ತರುವಾಯ ಯಾಗಶಾಲೆಯಲ್ಲಿ ಮೊಹೋತ್ಸವದ ಪ್ರಯುಕ್ತ ದ್ವಾರತೋರಣ, ಕುಂಭ ಮಂಡಲಾರ್ಚನೆ, ಅಗ್ನಿ ಪ್ರತಿಷ್ಠೆ ಮುಂತಾದ ಹೋಮಕಾರ್ಯಗಳು ನಡೆದು, ಶ್ರೀಯವರಿಗೆ ತಳಿಗೆ ನಿವೇದನವಾದನಂತರ ಆಸ್ಥಾನಕ್ಕೆ ಬಿಜಮಾಡಿಸುವರು

# ಎರಡನೆಯ ತಿರುನಾಳ್.



ಹಗಲು ನಿತ್ಯಕಟ್ಟಲೆಯಾದ ತರುವಾಯ ಬಲಿಪ್ರದಾನ ಮುಂತಾಗಿ ನಡೆಯುವುದು. ರಾತ್ರಿ ನಿತ್ಯಕಟ್ಟಲೆಯಾದ ನಂತರ ಶ್ರೀಯವರಿಗೆ ಉಭಯ ನಾಚ್ಯಾರ್ ಸಮೇತ ಶೇಷವಾಹನೋತ್ಸವವೇ ಮುಂತಾಗಿ ನಡೆಯುವುದು.

# ಮೂರನೆಯ ತಿರುನಾಳ್



ಎರಡನೆಯ ತಿರುನಾಳಿನಂತೆ ಹಗಲು ರಾತ್ರಿ ಉತ್ಸವಾದಿಗಳು ನಡೆದು ರಾತ್ರಿ ಚಂದ್ರಮಂಡಲೋತ್ಸವವು ನಡೆಯುವುದು.

# ನಾಲ್ಕನೆಯ ತಿರುನಾಳ್.



ರಾತ್ರಿ ನಿತ್ಯಕಟ್ಟಲೆಯಾದ ನಂತರ ಶ್ರೀಯವರು ಉಭಯನಾಚ್ಯಾರ್ ಮತ್ತು ಶ್ರೀ ಭಾಷ್ಯಕಾರರ ಸಮೇತ ಶ್ರೀ ವೇದಾಂತ ದೇಶಿಕರವರ ಸನ್ನಿಧಿಗೆ ಬಿಜಮಾಡಿಸಿ, ಅಲ್ಲಿ ಶ್ರೀಯವರುಗಳಿಗೆ ಶಾಸ್ತ್ರಮರ್ಯಾದೆಯಲ್ಲಿ ಶ್ರೀ.ಕೃಷ್ಣರಾಜಮುಡಿಯು ಧಾರಣೆಯಾಗಿ, ಅಲ್ಲಿಂದ ಪುಷ್ಪಮಂಟಪೋತ್ಸವಕ್ಕೆ ಬಿಜಮಾಡಿ, ತರುವಾಯ ಗ್ರಾಮ ಪ್ರದಕ್ಷಿಣೆಯಿಂದ ಶ್ರೀ ದೇಶಿಕರವರ ಸನ್ನಿಧಿಗೆ ದಯಮಾಡಿ, ಮುಡಿ ವಿಸರ್ಜನೆಯಿಂದ, ಶ್ರೀಯವರಿಗೂ ಮತ್ತು ಶ್ರೀ ಉಭಯನಾಚ್ಯಾರಮ್ಮನವರಿಗೂ ಬೇರೆ ಬೇರೆ ತಿರುಕ್ಕೈ ಸಮರ್ಪಣೆಮಾಡಿ, ಮುಡಿ ಕಿರೀಟ ಧಾರಣೆಯಿಂದ ದೇವಸ್ಥಾನಕ್ಕೆ ಬಿಜಮಾಡಿಸುವರು.

## ಐದನೆಯ ತಿರುನಾಳ್.



ನಿತ್ಯಕಟ್ಟಳೆಯಾದ ನಂತರ ಹಗಲು, ಮತ್ತು ರಾತ್ರಿ ಉತ್ಸವಾದಿಗಳು ಜರುಗುವುವು. ರಾತ್ರಿ ಪ್ರಹ್ಲಾದ ಪರಿಪಾಲನಯೇ ಮುಂತಾಗಿ ನಡೆದು ಗರುಡೋತ್ಸವವು ನಡೆಯುವುದು.

## ಆರನೆಯ ತಿರುನಾಳ್.



ಗಜೇಂದ್ರನಿಗೆ ಮೋಕ್ಷವೂ, ಹರಿದ್ರಾಚೂರ್ಣಾಭಿಷೇಕವೂ, ಕುದುರೆಯ ವಾಹನೋತ್ಸವವೂ, ನಡೆಯುವುವು.

## ಏಳನೆಯ ತಿರುನಾಳ್-ಬ್ರಹ್ಮೋತ್ಸವವು.



ಹಗಲು ನಿತ್ಯಕಟ್ಟಳೆಯಾದ ನಂತರ ರಥಾರೋಹಣದ ಪ್ರಯುಕ್ತ ಆಗಬೇಕಾದ ಕೆಲಸಗಳು ವಿಧಿ ವಿಹಿತವಾಗಿ ನಡೆದನಂತರ ಶ್ರೀ ಶಲ್ವ ಪಿಳ್ಳೈಯವರ ಜೊತೆಯಲ್ಲಿ ಶ್ರೀ ಉಭಯನಾಚ್ಚ್ಯಾರ್ರರಿಗೂ, ಶ್ರೀ ಕಲ್ಯಾಣಮ್ಮನವರಿಗೂ, ಮತ್ತು ಶ್ರೀ ಭಾಷ್ಯಕಾರರೂಕಲೆತು ರಥಾರೋಹಣವಾಗುವುದು. ವೇದಘೋಷವೂ, ಪ್ರಬಂಧಪಾರಾಯಣವೇ ಮುಂತಾದುವೂ ಜರುಗಿ, ಮಠಮರ್ಯಾದೆ, ರಾಜಮರ್ಯಾದೆ, ತೀರ್ಥ ಮುಂತಾಗಿ ನಡೆದ ನಂತರ ರಥ ಚಲನೆಯಾಗಿ ಗ್ರಾಮ ಪ್ರದಕ್ಷಿಣೆಯಿಂದ, ಸ್ವಸ್ಥಾನಕ್ಕೆ ನಿಂತಮೇಲೆ, ತಿರುಮಡಿ ಶಾತ್ತುಮುರೈ ಮುಂತಾಗಿ ನಡೆದ ತರುವಾಯ

ಶ್ರೀಯವರು ದೇವಸ್ಥಾನಕ್ಕೆ ಹಿಂತಿರುಗುವರು. ಆಮೆಲೆ ಶ್ರೀಯವರು ಕಲ್ಯಾಣಿಯ ಭುವನೇಶ್ವರಿ ಮಂಟಪಕ್ಕೆ ದಯಮಾಡಿ, ಮಂಟಪೋತ್ಸವವೇ ಮುಂತಾದುದು ನಡೆದ ನಂತರ ಆಸ್ಥಾನಕ್ಕೆ ಬಿಜಮಾಡಿಸುವರು. ತರುವಾಯ ನಿತ್ಯಕಟ್ಟಲೆಯು ನಡೆಯುವುದು. ಇದೇ ರೀತಿಯಲ್ಲಿ ಅಂಕುರಾರ್ಪಣದಿಂದ ತೀರ್ಥಸ್ನಾನದವರೆಗೂ ಹಗಲೂ ರಾತ್ರಿ ಉತ್ಸವಗಳು ನಡೆಯುವುವು.

## ಎಂಟನೆಯ ತಿರುನಾಳ್ ತೆಪ್ಪೋತ್ಸವವು.



ಮಧ್ಯಾಹ್ನ ಭುವನೇಶ್ವರಿ ಮಂಟಪೋತ್ಸವದ ಕಟ್ಟಲೆಯು ನಡೆದ ತರುವಾಯ, ಶ್ರೀಯವರ ತೆಪ್ಪೋತ್ಸವವು ತಿರುಕ್ಕಲ್ಯಾಣಿಯಲ್ಲಿ ನಡೆಯುವುದು ನಂತರ ಶ್ರೀಯವರು ದೇವಸ್ಥಾನದಲ್ಲಿನ ಶ್ರೀ ಅಮ್ಮನವರ ಸನ್ನಿಧಿಗೆ ಬಿಜಮಾಡಿಸಿ, ಅಲ್ಲಿ ಡೋಲೋತ್ಸವದ ನಿತ್ಯಕಟ್ಟಲೆ ಮುಂತಾಗಿ ಜರುಗುವುದು. ತರುವಾಯ ಶ್ರೀಯವರು ಕುದುರೆಯ ವಾಹನೋತ್ಸವದಿಂದ ಗ್ರಾಮ ಪ್ರದಕ್ಷಿಣೆಯನ್ನು ಮಾಡಿಕೊಂಡು, ತಿರುಮಂಗಿಯಾಳ್ವಾರವರನ್ನು ಸಂಧಿಸಿ, ಶ್ರೀಯವರ ಆಭರಣಗಳು ಸುಲಿಗೆ ಯಾದನಂತರ ಅರೆಯರು ಶ್ರೀಯವರನ್ನೂ, ಮತ್ತು ಆಳ್ವಾರ್ರನ್ನೂ ಸಮಾಧಾನಪಡಿಸುವರು. ಆಳ್ವಾರ್ರವರು ಹಿಂತಿರುಗಿದ ನಂತರ ಶ್ರೀಯವರು ಆಸ್ಥಾನಕ್ಕೆ ಬಿಜಮಾಡಿಸುತ್ತಾರೆ.

## ಒಂಬತ್ತನೆಯ ತಿರುನಾಳ್ ಅವಭೃಥೋತ್ಸವವು.



ಶ್ರೀಯವರು ಪಲ್ಲಕ್ಕಿಯಲ್ಲಿ ನಗರ ಶೋಧನೆಗಾಗಿ ಗ್ರಾಮ ಪ್ರದಕ್ಷಿಣೆಯಿಂದ ತಿರುಮಂಗೈಯಾಳ್ವಾರ್‌ರವರ ಸನ್ನಿಧಿಗೆ ದಯಮಾಡಿ, ಅವರ ಮುಖಾಂತರ ಶ್ರೀಯವರ ತಿರುವಾಭರಣ

ಗಳನ್ನು ಹಿಂತಿರುಗಿ ಪಡೆದು, ಶ್ರೀಪಾದಕಾಂಗಿಯವರಿಗೆ ಮರ್ರ್ಯಾದೆ ಮುಂತಾಗಿ ಜರುಗಿದ ನಂತರ, ದೇವಸ್ಥಾನಕ್ಕೆ ಹಿಂತಿರುಗಿ, ಶ್ರೀ ಯದು ಗಿರಿಯಮ್ಮನವರ ಸನ್ನಿಧಿಗೆ ದಯಮಾಡಿ ಸಂಧಾನ ಸೇವೆಗೆ ಶ್ರೀ ಉಭ ಯನಾಚ್ಚಾರ್ರುಗಳ ಎದುರಾಗಿ ಬಿಜಮಾಡಿಸುವರು. ಈ ಸೇವೆಯು ಕ್ರಮ ಪ್ರಕಾರ ನಡೆದ ನಂತರ ಶ್ರೀಯವರು ಚತುಸ್ಥಾನಾರ್ಚನೆಯಿಂದ ಗ್ರಾಮ ಪ್ರದಕ್ಷಿಣೆಯಾಗಿ, ತಿರುಕ್ಕಲ್ಯಾಣಿಗೆ ಬಿಜಮಾಡಿಸಿ, ಅಲ್ಲಿ ಅವಭೃಥ ಸ್ನಾ ನವು ನಡೆಯುವುದು. ಸಾಯಂಕಾಲ ಶ್ರೀಯವರು ಪಟ್ಟಾಭಿರಾಮನ ಅಲಂ ಕಾರವನ್ನು ಧರಿಸಿ, ಇವರಿಗೆ ತಿರುವಾರಾಧನೆ ಮುಂತಾಗಿ ನಡೆದ ನಂತರ ಶ್ರೀ ಉಭಯನಾಚ್ಚಾರ್ರುಗಳ ಸಮೇತ ಸಮರ ಭೂಪಾಲವಾಹನೋತ್ಸವದಿಂದ ದೇವಸ್ಥಾನಕ್ಕೆ ಹಿಂತಿರುಗಿ, ಬಲಿಪೀಠದ ಬಳಿಯಲ್ಲಿ, ತಿರುವಾರಾಧನೆ ಮುಂತಾಗಿ ನಡೆದ ತರುವಾಯ ಶ್ರೀ ಅಮ್ಮನವರ ಸನ್ನಿಧಿಯ ಬಳಿ ಇರುವ ಮಂಟಪಕ್ಕೆ ಬಿಜಮಾಡಿಸಿ, ಅಲ್ಲಿ ಮರ್ರ್ಯಾದೆ ಮುಂತಾಗಿ ನಡೆದು ಪೂರ್ಣಾಹುತಿ, ತಳಿಗೆಯ ನಿವೇದನವು ನಡೆಯುವುದು. ಆಮೇಲೆ ಶ್ರೀ ಉತ್ಸವರನ್ನು ತಿರುನಾರಾಯಣ ಸ್ವಾಮಿಯವರ ಸನ್ನಿಧಿಯ ಮುಂಭಾಗ ದಲ್ಲಿ ಬಿಜಮಾಡಿಸಿದ ತರುವಾಯ, ಶ್ರೀಯವರಿಗೂ, ಶ್ರೀ ರಾಮಪ್ರಿಯ ರಿಗೂ ತಿರುವಾರಾಧನೆ, ಆರತಿ ಮುಂತಾಗಿ ಜರುಗಿದ ನಂತರ, ಮಹಾ ಕುಂಭಪ್ರೋಕ್ಷಣೆ, ರಕ್ಷಾಬಂಧನ ವಿಸರ್ಜನ, ಅಪರಾಧ ಕ್ಷಮಾಪಣೆ ಮುಂತಾದುದು ನಡೆದು, ಆಸ್ಥಾನಕ್ಕೆ ದಯಮಾಡಿಸುವರು.

## ಹತ್ತನೆಯ ತಿರುನಾಳ್.



ಧ್ವಜಾವರೋಹಣವೂ ಮತ್ತು ಪುಷ್ಪಯಾಗೋತ್ಸವವೂ ನಡೆಯು ವುವು. ರಾತ್ರಿ ಶ್ರೀಯವರಿಗೆ ಹನುಮಂತ ವಾಹನೋತ್ಸವವೂ ಮತ್ತು ಇತರ ವಿಧಿವತ್ತಾದ ಕೈಂಕರ್ಯಗಳೂ ನಡೆಯುವುವು.

# ೧೯. ಶ್ರೀ ಯದಗಿರಿಯಮ್ಮನವರ ವರ್ಧಂತಿಯು.



ಇದು ಆಷಾಢ ಬಹುಳ ಮೃಗಶಿರೆಯಿಂದ ಪುಬ್ಬಾನಕ್ಷತ್ರದ ವರೆಗೆ ನಡೆಯುವುದು. ಮೊದಲನೆಯ ದಿವಸ ಶ್ರೀ ಅಮ್ಮನವರ ತಿರುನಕ್ಷತ್ರದ ಉದ್ದೇಶ್ಯ ತೊಡಕಕ್ಕೆ ಪ್ರಾರಂಭವಾಗುವುದು. ಈ ದಿವಸದಿಂದ ತಿರುನಕ್ಷತ್ರದ ದಿನದವರೆಗೆ ಅಹೋರಾತ್ರ ಎರಡು ವೇಳೆಯಲ್ಲಿಯೂ ನಾಲ್ಕುಸಾವಿರ ದಿವ್ಯಪ್ರಬಂಧವನ್ನು ಪಾರಾಯಣ ಮಾಡುವರು. ಮಾರನೆಯ ದಿವಸ ಮಧ್ಯಾಹ್ನ ನಾಲ್ಕು ಘಂಟೆಯ ಮೇಲೆ ಶ್ರೀ ಉತ್ಸವ ಅಮ್ಮನವರನ್ನು ಪಲ್ಲಕ್ಕಿಯಲ್ಲಿ ಬಿಜಮಾಡಿಸಿ ಗ್ರಾಮ ಪ್ರದಕ್ಷಿಣೆಯಿಂದ ಸಂಸ್ಕೃತ ಪಾಠಶಾಲೆಯ ಬಳಿಯಲ್ಲಿ ತಿರುವಂದಿಕ್ಕಾಪ್ ನಡೆಯುವುದು. ಉತ್ಸವದ ವೇಳೆ "ತಿರುವಂದಾದಿ" ಸೇವಾಕಾಲ ಮಾಡುವರು. ರಾತ್ರಿ ಶ್ರೀಯವರ ಸನ್ನಿಧಿಯಲ್ಲಿ ನಿತ್ಯ ಕಟ್ಟಲೆಯಾದ ನಂತರ ಶ್ರೀ ಅಮ್ಮನವರ ಸನ್ನಿಧಿಯಲ್ಲಿ ಅಲಂಕಾರ, ತಿರುವಾರಾಧನೆ, ಮಂತ್ರಪುಷ್ಪ, ಅಷ್ಟೋತ್ತರ ಮುಂತಾದುದು ನಡೆಯುವುವು. ತಿರುನಕ್ಷತ್ರದ (ಆಡಿಮಾಸ-ಪುಬ್ಬಾನಕ್ಷತ್ರ) ದಿವಸ ನಿತ್ಯ ಕಟ್ಟಲೆಯು ನಡೆದ, ತರುವಾಯ, ಶ್ರೀ ಉತ್ಸವರ ಅಮ್ಮನವರನ್ನು ಗಜಲಕ್ಷ್ಮೀವಾಹನಕ್ಕೆ ಬಿಜಮಾಡಿಸಿ, ಅಲ್ಲಿ ತೈಲ, ಅರುಶಿನ ಮುಂತಾದುದನ್ನು ಸಮರ್ಪಿಸಿ ನಿವೇದನವಾಗಿ, ಗೋಷ್ಠೀವಿನಿಯೋಗವಾದ ಬಳಿಕ ಗ್ರಾಮ ಪ್ರದಕ್ಷಿಣೆಯಿಂದ, ದೇವಸ್ಥಾನದ ಬಾಗಿಲಿನಲ್ಲಿ "ರಾಮಾನುಜನೂತ್ತಂದಾದಿ" ಶಾತ್ತುಮುರೈಯಾಗಿ ಆಸ್ಥಾನಕ್ಕೆ ದಯಮಾಡಿಸುವರು.

ನಂತರ ಶ್ರೀ ನೃಸಿಹ್ಮಜಯಂತಿಯ ಕಟ್ಟಲೆಯ ಮೇರೆ ಪುಣ್ಯಾಹ ಪುರಸ್ಸರವಾಗಿ ಸ್ನಪನ, ಪಂಚಾಮೃತಾಭಿಷೇಕ, ಹನ್ನೆರಡು ತಿರುವಾರಾಧನೆ ಮುಂತಾದುದು ವಿಧಿವತ್ತಾಗಿ ನಡೆಯುವುವು.

# ೨೦. ಆಡಿಶುಕ್ರವಾರದ ಸೇವೆಯು.

ಆಡಿಮಾಸದಲ್ಲಿ ಬರುವ ನಾಲ್ಕು ಶುಕ್ರವಾರಗಳಲ್ಲಿ ಈ ಸೇವೆಯು ನಡೆಯುವುದು.

ನಿತ್ಯಕಟ್ಟಳೆಯಂತೆ ಅಷ್ಟೋತ್ತರ ಮುಂತಾದುದು ಸನ್ನಿಧಿಯಲ್ಲಿ ನಡೆದ ನಂತರ, ಪುಬ್ಬಾ ನಕ್ಷತ್ರದ ಸೇವೆಯಂತೆ, ಶ್ರೀ ಯದುಗಿರಿಯಮ್ಮನವರಿಗೆ ಅಭಿಷೇಕ ಮುಂತಾದುದು ನಡೆಯುವುವು.

## ೨೧. ಉಪಾಕರ್ಮವು.

---

ಶ್ರಾವಣ ಶುದ್ಧ ತ್ರಯೋದಶಿಯಲ್ಲಿ ಋಗುಪಾಕರ್ಮವೂ, ಶ್ರಾವಣ ಶುದ್ಧ ಪೌರ್ಣಿಮಾದಲ್ಲಿ ಯಜುರುಪಾಕರ್ಮವೂ, ಮತ್ತು ಭಾದ್ರಪದ ಶುದ್ಧ ಹಸ್ತ ನಕ್ಷತ್ರದಲ್ಲಿ ಸಾಮಗೋಪಾಕರ್ಮವೂ ನಡೆಯುವುವು.

---

ಆಯಾಯ ಉಪಾಕರ್ಮದ ದಿವಸ ಆಯಾಯ ಪಂಗಡದವರು ತಿರುಕ್ಕಲ್ಯಾಣಿಯಲ್ಲಿ ಮಂತ್ರವತ್ತಾಗಿ ಯಜ್ಞೋಪವೀತ ಧಾರಣೆಯಂ ಮಾಡಿಕೊಂಡು, ಮಂಗಳ ವಾದ್ಯಗಳೊಡನೆ ದೇವಸ್ಥಾನಕ್ಕೆ ಬರುವರು. ಅಲ್ಲಿಯ ನಾಲ್ಕು ಸನ್ನಿಧಿಗಳಲ್ಲಿಯೂ ತೀರ್ಥಪ್ರಸಾದವನ್ನು ಕೊಡುವರು. ಉಪಾಕರ್ಮದ ಪ್ರಯುಕ್ತ ದೇವಸ್ಥಾನದಿಂದ, ಶ್ರೀ ಪರಕಾಲಮಠಕ್ಕೂ ಮತ್ತು ಅರಮನೆಗೂ ಯಜ್ಞೋಪವೀತಗಳನ್ನು ಕಳುಹಿಸುವರು.

## ೨೨. ಶ್ರೀ ಪ್ರಸನ್ನ ಕೃಷ್ಣಸ್ವಾಮಿಯವರ ರಥೋತ್ಸವದ ಕಟ್ಟಳೆಯು.



ಇದು ಸಿಂಹಮಾಸ ಭರಣಿ ನಕ್ಷತ್ರದಲ್ಲಿ ಮೈಸೂರಿನಲ್ಲಿ ಬಹಳ ವಿಜೃಂಭಣೆಯಿಂದ ನಡೆಯುವುದು.

ರಥೋತ್ಸವದ ಹಿಂದಣ ದಿವಸದಲ್ಲಿ ಶ್ರೀ ತಿರುನಾರಾಯಣ ಸ್ವಾಮಿಯವರ ದೇವಸ್ಥಾನದಿಂದ, ಶ್ರೀಯವರಿಗೆ ನಿವೇದನವಾದ ಪ್ರಸಾದ, ಮಾಲೆ, ಪರಿವಟ್ಟ, ಅಭಯಹಸ್ತ, ಯಜ್ಞೋಪವೀತ, ಮುಂತಾದವುಗಳನ್ನು ಮರ್ಯಾದೆಯಿಂದ, ಶ್ರೀಯವರ ಕೈಂಕರ್ಯ—ಪರರ ಮುಖಾಂತರವಾಗಿ ಮೈಸೂರಿಗೆ ಕಳುಹಿಸುವರು. ಅವರು ಇವುಗಳನ್ನು ಬಿಜಮಾಡಿಸಿಕೊಂಡು ಹೋಗಿ, ಮೈಸೂರಿನಲ್ಲಿ ನಡೆಯುವ ರಥೋತ್ಸವದ ದಿವಸ, ಶ್ರೀ ಕೃಷ್ಣ ಸ್ವಾಮಿಯವರ ರಥಾರೋಹಣದವೇಳೆ, ಇವುಗಳನ್ನು ಶ್ರೀಯವರಿಗೆ ಒಪ್ಪಿಸಿ, ಮರ್ಯಾದೆಯನ್ನು ಹೊಂದಿ, ಹಿಂತಿರುಗುವುರು.

## ೨೩. ಶ್ರೀಕೃಷ್ಣಜಯಂತಿ ಉತ್ಸವವು.



ಇದು ಸಿಹ್ಮಮಾಸ ರೋಹಿಣಿ ನಕ್ಷತ್ರದಲ್ಲಿ ನಡೆಯುವುದು.

ಸಾಯಂಕಾಲ ಶ್ರೀಯವರಿಗೆ ನಿತ್ಯಕಟ್ಟಲೆ ಯಾದನಂತರ ಶ್ರೀ ತಿರುನಾರಾಯಣ ಸ್ವಾಮಿಯವರ ಮುಂಭಾಗದಲ್ಲಿ ಶ್ರೀ ಕೃಷ್ಣದೇವರನ್ನು ಗೋಮುಖದಲ್ಲಿ ಬಿಜಮಾಡಿಸಿ, ಸಭಾನುಜ್ಞೆ, ಪುಣ್ಯಾಹ, ರಕ್ಷಾಬಂಧನ, ಪಂಚಾಮೃತ ಸ್ನಪನ ಮುಂತಾದುದು ನಡೆದು, ಹನ್ನೆರಡು ತಿರುವಾರಾಧನೆ ಪೂರ್ವಕವಾಗಿ, ಶ್ರೀಕೃಷ್ಣದೇವರಿಗೆ ಅಭಿಷೇಕವಾಗಿ, ಪೆರಿಯಾಳ್ವಾರ್ ತಿರುಮಡಿಸೇವೆ, ಶಾತ್ತುಮುರೈ, ತೀರ್ಥ, ಪ್ರಸಾದ ವಿನಿಯೋಗ ಮುಂತಾಗಿ ನಡೆಯುವುವು.

ಮಾರನೆಯ ದಿವಸ ಶ್ರೀಯುವರು ನಿತ್ಯೋತ್ಸವದ (ಉರಿಅಡಿ) ಪ್ರಯುಕ್ತ ಸಾಯಂಕಾಲ ಪಲ್ಲಕ್ಕಿಯಲ್ಲಿ ಪೇಟೆಯ ಶ್ರೀ ಕೃಷ್ಣದೇವರ ದೇವಸ್ಥಾನಕ್ಕೆ ಬಿಜಮಾಡಿ, ಅಲ್ಲಿ ತಿರುವಾರಾಧನೆ, ಆರತಿ, ತೀರ್ಥ, ವಿನಿಯೋಗ ಮುಂತಾಗಿ ನಡೆದು, ಶ್ರೀಯವರ ದೇವಸ್ಥಾನದ ಬಾಗಿಲಿನ ಬಳಿಗೆ ದಯೆ

ಮಾಡುವರು ಆಗ ಶ್ರೀ ಚಲುವರಾಯ ಸ್ವಾಮಿಯವರು ಕುದುರೆಯ ವಾಹನಕ್ಕೆ ಬಿಜಮಾಡಿ, ಗ್ರಾಮ ಪ್ರದಕ್ಷಿಣೆಯಿಂದ, "ಉರಿ ಅಡಿ" ಎಂಬ ಉತ್ಸವವು ನಡೆದು, ಆಸ್ಥಾನ ಮಂಟಪಕ್ಕೆ ದಯಮಾಡಿಸುವರು.

## ೨೪. ಶ್ರೀ ಗೌರಿಯ ಹಬ್ಬವು.

ಇದು ಭಾದ್ರಪದ ಶುದ್ಧ ತೃತೀಯೆಯಲ್ಲಿ ನಡೆಯುವುದು ಈ ದಿನ ವೈಷ್ಣವ ಬ್ರಾಹ್ಮಣರು ಕಲ್ಯಾಣಿಯಿಂದ ಗಿರಿಜೆಯ ಪೂಜೆಯಂ ಮಾಡಿಕೊಂಡು, ಪಲ್ಲಕ್ಕಿಯಲ್ಲಿ ದೇವಸ್ಥಾನದ ಸಮಸ್ತ ವಾದ್ಯ ಬಿರು ದಾವಳಿಗಳೊಡನೆ, ಹೆಬ್ಬಾಗಿಲು ಮಾರ್ಗವಾಗಿ ಬಂದು, ವೈಷ್ಣವರು ಮನೆಯಲ್ಲಿ ಮೂರು ಅಥವಾ ಐದು ದಿವಸಗಳ ಪರ್ಯಂತರ ಪೂಜೆಯಂ ಮಾಡುವರು. ನಂತರ ದೇವಸ್ಥಾನದ ಕಚೇರಿಯ ಶ್ರೀ ವಿನಾಯಕನ ಜೊತೆಯಲ್ಲಿ ಮಂಗಳ ವಾದ್ಯಗಳ ಸಮೇತ ಗೌರಮ್ಮನ ಕೊಳದಲ್ಲಿ ಅಂ ಬಿಕೆಯನ್ನು ಬಿಡುವರು

## ೨೫. ಶ್ರೀ ಗಣೇಶನ ಹಬ್ಬವು.

ಇದು ಭಾದ್ರಪಧ ಶುದ್ಧ ಚತುರ್ಥಿಯಲ್ಲಿ ಬರುವುದು

ಈ ದಿವಸ ದೇವಸ್ಥಾನದ ಜೋಯಿಸರು ನಾಗಮಂಗಲದ ಬಾಗಿಲಿ ನಲ್ಲಿರುವ ಶ್ರೀ ವಿನಾಯಕನಿಗೆ ಅಭಿಷೇಕವಂ ಮಾಡುವರು. ಮಧ್ಯಾಹ್ನಾ ತ್ಪರ ದೇವಸ್ಥಾನದ ಅಧಿಕಾರಿಗಳೂ ಮತ್ತು ಊರಿನ ಮಹಾಜನಗಳೂ, ಮಂಗಳ ವಾದ್ಯಗಳೊಡನೆ ದೇವಸ್ಥಾನಕ್ಕೆ ಹೋಗಿ, ಅಲ್ಲಿ ಪೂಜೆ ಮಂಗ ಳಾರತಿ, ನಿವೇದನ, ರಾಜ ಮರ್ಯಾದೆ ಮುಂತಾದುದು ನಡೆದ ತರುವಾಯ ದೇವಸ್ಥಾನದ ಕಚೇರಿಯಲ್ಲಿ ವಿಘ್ನರಾಜನ ಪೂಜೆ ಮುಂತಾದುದು ಮೂರು ದಿವಸಗಳು ನಡೆಯುವುವು. ತರುವಾಯ ವಿಸರ್ಜನೆಯಿಂದ, ಶ್ರೀ ಪಾರ್ವ ತಿಯ ಜೊತೆಯಲ್ಲಿ ಮಂಗಳ ವಾದ್ಯದೊಡನೆ ಗಿರಿಜೆಯ ಕೊಳಕ್ಕೆ ಗಜಾನನನನ್ನು ಬಿಡುವರು.

# ೨೬. ಶ್ರೀ ವೇದಾಂತದೇಶಿಕರವರ ತಿರುನಕ್ಷತ್ರವು.

---

ಇದು ಕನ್ಯಾಮಾಸ ಉತ್ತರಾ ನಕ್ಷತ್ರದಿಂದ ಶ್ರವಣ ನಕ್ಷತ್ರದ ವರೆಗೆ ಹನ್ನೊಂದು ದಿವಸಗಳ ಪರ್ಯಂತರ ನಡೆಯುವುದು.

ಶ್ರವಣ ನಕ್ಷತ್ರಕ್ಕೆ ಹನ್ನೊಂದು ದಿವಸ ಪೂರ್ವಭಾಗಿಯಾಗಿ ಅಂದರೆ ಉತ್ತರಾ ನಕ್ಷತ್ರದಲ್ಲಿಯು ಸಾಯಂಕಾಲ ಶ್ರೀ ಶಲ್ವಪ್ಪಿಳ್ಳೈಯವರೂ ಶ್ರೀ ಉಭಯನಾಚ್ಚಾರ್ರಮ್ಮನವರೂ, ಮತ್ತು ಶ್ರೀ ರಾಮಾನುಜಾಚಾರ್ಯರೂ ಸಹ ಗ್ರಾಮ ಪ್ರದಕ್ಷಿಣೆಯಾಗಿ ಶ್ರೀ ವೇದಾಂತ ದೇಶಿಕರವರ ಸನ್ನಿಧಿಗೆ ಬಿಜಮಾಡಿ, ಅಲ್ಲಿ ತಿರುವಾರಾಧನೆ, ಆರತಿ, ಮುಂತಾಗಿ ನಡೆದು ನಿವೇದನವಾಗಿ ಪ್ರಬಂಧಕ್ಕೂ ಮತ್ತು ವೇದಕ್ಕೂ ಸಹ ಅರುಳಪ್ಪಾಡು ನಡೆಯುವುದು. ನಂತರ ಗೋಷ್ಠಿಗೆ ತೀರ್ಥ ಮುಂತಾಗಿ ವಿನಿಯೋಗವಾದ ಬಳಿಕ, ಶ್ರೀಯವರು ಆಸ್ಥಾನಕ್ಕೆ ಬಿಜಮಾಡಿಸುವರು. ಈ ಹತ್ತು ದಿನಗಳೂ ಹಗಲು ರಾತ್ರಿ ಸಹ ಅವಿಚ್ಛಿನ್ನವಾಗಿ ನಾಲ್ಕು ಸಾವಿರ ಪ್ರಬಂಧ ಮತ್ತು ಏಳುಕಾಂಡ ಯಜುರ್ವೇದ ಪಾರಾಯಣವೂ ಜರುಗುವುವು.

ಏಳನೆಯ ದಿವಸ ರಾತ್ರಿ ಶ್ರೀಯವರ ಸನ್ನಿಧಿಯಲ್ಲಿ ನಿವೇದನವಾದ ತರುವಾಯ ಶ್ರೀ ಮೊದಲಿಯಾರ್ಣ್ಡಾನ್‍ರವರು (ಅಂದರೆ ಶ್ರೀ ಯತಿವರ್ಯರ ಪಾದುಕೆಗಳು) ಶ್ರೀಯವರ ದೇವಸ್ಥಾನದ ಪ್ರದಕ್ಷಿಣೆಯಾಗಿ, ಯತಿರಾಜ ಸಪ್ತತಿ ಪಾರಾಯಣದೊಡನೆ ಶ್ರೀ ಲಕ್ಷ್ಮಣಯೋಗೀಂದ್ರರ ಸನ್ನಿಧಿಗೆ ಬಿಜಮಾಡಿ, ಶ್ರೀಮದಾಚಾರ್ಯರಿಗೆ ಪರಿವಟ್ಟ, ಮಾಲೆ, ಅಭಯಹಸ್ತ, ಶಠಾರಿ ಮುಂತಾದ ಮರ್ಯಾದೆಗಳು ನಡೆದನಂತರ ತಳಿಗೆ ನಿವೇದನದಿಂದ ಆರತಿಯಾಗುವುದು. ಅಮೇಲೆ ಸಾಯಹಕವೆಂಬ ಪ್ರಬಂಧವನ್ನೂ ಪಾರಾಯಣ ಮಾಡಿ ಯತಿರಾಜಸಪ್ತತಿ ಶಾತ್ತುಮುರೈಯಾಗಿ ಗೋಷ್ಠಿಗೆ ಸಹ ಶ್ರೀ ಶಠಾರಿ ಮುಂತಾಗಿ ನಡೆದು ಆಸ್ಥಾನಕ್ಕೆ ದಯಮಾಡಿಸುವರು.

ತಿರುನಕ್ಷತ್ರದ ದಿವಸ ಪ್ರಾತಃಕಾಲ ಕಲ್ಯಾಣಿಯಿಂದ ಆಳವಂದಾರ್ ಸ್ತೋತ್ರ ಪಾರಾಯಣದೊಡನೆ, ಅಗ್ರೋದಕವನ್ನು ಶ್ರೀಮದಾಚಾರ್ಯರ ಸನ್ನಿಧಿಗೆ ತಂದು, ತರುವಾಯ ಸಭಾನುಜ್ಞೆ, ಪುಣ್ಯಾಹ, ಪಂಚಾಮೃತಾಭಿಷೇಕ, ಹನ್ನೆರಡು ತಿರುವಾರಾಧನೆಯಿಂದ ಅಭಿಷೇಕವು ನಡೆದು, ಅಲಂಕಾರವಾಗಿ ತಿರುವಾರಾಧನೆ ಮುಂತಾದುದು ನಡೆದ ತರುವಾಯ ಶ್ರೀ ಮೊದಲಿಯಾಂಡಾಂರವರು ಗ್ರಾಮ ಪ್ರದಕ್ಷಿಣೆಯಿಂದ ಶ್ರೀ ಕವಿತಾರ್ಕಿಕಸಿಹ್ಮರವರ ಸನ್ನಿಧಿಗೆ ಬಿಜಮಾಡಿ, ಶಾತ್ತುಮುರೈಯಾದ ನಂತರ ಆಸ್ಥಾನಕ್ಕೆ ಬಿಜಮಾಡಿಸುವರು.

ನಂತರ ಶ್ರೀ ನರಸಿಹ್ಮಜಯಂತಿ ಕಟ್ಟಲೆಯ ಪ್ರಕಾರ ತೀರ್ಥವಿನಿಯೋಗ, ಶಾತ್ತುಮುರೈ ಮುಂತಾಗಿ ನಡೆಯುವುದು.

ಮಧ್ಯಾಹ್ನ ಶ್ರೀಯವರು ಶ್ರೀ ಭಾಷ್ಯಕಾರರ ಸನ್ನಿಧಿಗೆ ಬಿಜಮಾಡಿ, ಆರತಿ, ತಿರುವಾರಾಧನೆ, ನಿವೇದನ, ತಿರವಾಯ್‌ಮುಳಿ ಶಾತ್ತುಮುರೈಯಾದ ನಂತರ ಶ್ರೀ ಉತ್ಸವರೂ ಮತ್ತು ಶ್ರೀ ರಾಮಾನುಜಾಚಾರ್ಯರವರೂ, ಶ್ರೀ ವೇದಾಂತಾಚಾರ್ಯರ ಸನ್ನಿಧಿಗೆ ದಯಮಾಡಿ, ಅಲ್ಲಿ ತಿರುವಾರಾಧನೆ, ಆರತಿ, ನಿವೇದನ, ವೇದ ಮತ್ತು ಪ್ರಬಂಧ ಶಾತ್ತುಮುರೈಯಾಗಿ, ಗೋಷ್ಠಿಗೆ ತೀರ್ಥ ವಿನಿಯೋಗ ಮುಂತಾಗಿ ನಡೆದ ತರುವಾಯ ಶ್ರೀಯವರುಗಳು ತಮ್ಮ ತಮ್ಮ ಆಸ್ಥಾನಗಳಿಗೆ ಹಿಂತಿರುಗುವರು.

ಶ್ರೀ ವೇದಾಂತ ದೇಶಿಕವರು ಕನ್ಯಾಮಾಸ, ಶ್ರವಣ ನಕ್ಷತ್ರದಲ್ಲಿ ತುಪ್ಪಿಲ್ ಎಂಬ ಸ್ಥಳದಲ್ಲಿ ತಿರುಮಲೈ ಶ್ರೀ ಶ್ರೀನಿವಾಸನ ಘಂಟಾಂಶದಿಂದ ಅವತರಿಸಿದರು. ಇವರು ಶ್ರೀ ಭಾಷ್ಯಕಾರರ ಸಿದ್ಧಾಂತವನ್ನು ಸ್ಥಿರೀಕರಿಸಿ ಅಭಿವೃದ್ಧಿಗೆ ತಂದರು.



# ೨೭. ತಿರುಪವಿತ್ರೋತ್ಸವವು.

ಇದು ಭಾದ್ರಪದ ಶುದ್ಧ ಏಕಾದಶಿಯಿಂದ ಪ್ರಾರಂಭವಾಗಿ, ಬಹುಳ ದಶಿಮಿಯವರಗೆ ಏಳು ದಿವಸಗಳು, ನಡೆಯುವುದು

ಏಕಾದಶಿ ತಿಥಿಗೆ ಪೂರ್ವಭಾವಿ ರಾತ್ರಿಯ ನಿತ್ಯಕಟ್ಟಲೆಯಾದ ನಂತರ ಡೋಲೋತ್ಸವ ಪ್ರಕಾರ ಅಂಕುರಾರ್ಪಣವು ನಡೆದು ಶಯ್ಯಾಸನದ ತಳಿಗೆ ಮುಂತಾಗಿ ನಡೆಯುವುದು.

ಏಕಾದಶಿಯ ದಿವಸ ನವರಂಗದ ಮಧ್ಯಾಂಕಣದಲ್ಲಿ "ಚಕ್ರಾಬ್ಜ ಮಂಡಲವಂ" ಬರೆದು, ರಾತ್ರಿ ನಿತ್ಯಕಟ್ಟಲೆಯಾದ ನಂತರ ಯಾಗ ಶಾಲೆಯಲ್ಲಿ ಅಧಿವಾಸರ ಹೋಮ, ತಿರುಪವಿತ್ರ ಪ್ರತಿಷ್ಠೆ ಮುಂತಾದುದು ನಡೆದು, ಶ್ರೀಯವರ ಸನ್ನಿಧಿಯಲ್ಲಿ ಡೋಲೋತ್ಸವ ಪ್ರಕಾರ ರಕ್ಷಾಬಂಧನ ಮುಂತಾದುದು ನಡೆದು, "ದ್ವಾರ ತೋರಣ ಕುಂಭ ಮಂಡಲಾವಾಹನ" ಮುಂತಾದುದು ನಡೆದು, ಶ್ರೀಯವರಿಗೆ ಕರ್ಮಾಂಗವಾಗಿ ಒಂದು ತಿರುಪವಿತ್ರ ಧಾರಣೆಯಾಗಿ, ನಂತರ ಶಯ್ಯಾಸನದ ತಳಿಗೆ ಮೊದಲಾದುದು ನಡೆಯುವುದು

## ಎರಡನೆಯ ಉತ್ಸವವು.



ದ್ವಾದಶಿ ದಿವಸ ಶ್ರೀ ತಿರುನಾರಾಯಣ ಸ್ವಾಮಿಯವರಿಗೆ ನಿತ್ಯ ಕಟ್ಟಲೆ, ಸ್ನಪನ ನಡೆದು, ನಂತರ ಹನ್ನೆರಡು ತಿರುವಾರಾಧನೆ ಮೂಲಕವಾಗಿ ಹನ್ನೆರಡು ಪವಿತ್ರಗಳು ಧಾರಣೆಯಾಗಿ, ತರುವಾಯ ಧೂಪ, ದೀಪ, ತಳಿಗೆ ಮುಂತಾದ ಪೂಜೋಪಕರಣಗಳಿಗೂ ಸಹ ಪವಿತ್ರ

ಧಾರಣೆಯಾಗಿ, ವಿಧ್ಯುಕ್ತವಾಗಿ ಮಾತುದಾನ, ಮಂತ್ರಪುಷ್ಪ, ಸಹಸ್ರ ನಾಮಾರ್ಚನೆ ಮುಂತಾಗಿ ನೆಡೆಯುವುದು. ಶ್ರೀಯವರಿಗೆ ಹನ್ನೆರಡು ತಿರುವಾರಾಧನೆಯೊಂದಿಗೆ ತಿರುಪವಿತ್ರಧಾರಣೆಯ ಕಾಲದಲ್ಲಿ ವೇದಪಾರಾ ಯಣದವರು ಕಾಠಕದ ಮೂರು ಪ್ರಶ್ನದ ಪಠನವಂ ಮಾಡುವರು. ಪ್ರಬಂಧ ಪಾರಾಯಣದವರು ಪ್ರಬಂಧವನ್ನು ಪಠಿಸುವರು. ಈ ಪವಿ ತ್ರೋತ್ಸವದ ಏಳು ದಿವಸವೂ, ಒಂದೊಂದು ದಿನಕ್ಕೆ ಒಂದೊಂದು ಕಾಂ ಡದಂತೆ (ವೇದಭಾಗ) ಪಾರಾಯಣವಂ ಮಾಡಿ ಏಳನೆಯದಿವಸ ಶಾತ್ತು ಮುರೈ ಪ್ರಬಂಧ–ಶಾತ್ತುಮುರೈ ಸಹ ನಡೆಯುವುದು. ಇದರಂತೆಯೇ ಶ್ರೀ ಯದುಗಿರಿಯಮ್ಮನವರ ಸನ್ನಿಧಿಯಲ್ಲಿಯೂ, ಶ್ರೀ ರಾಮಾನುಜಾಚಾರ್ಯ ರವರ ಸನ್ನಿಧಿಯಲ್ಲಿಯೂ, ಮತ್ತು ಇತರ ಸುತ್ತುಗುಡಿಗಳಲ್ಲಿಯೂ ಪವಿತ್ರ ಧಾರಣೆಯಾಗಿ, ಯಾಗಶಾಲೆಯಲ್ಲಿ ಹೋಮ ಮುಂತಾದುದು ನಡೆದು, ಶ್ರೀ ಭಾಷ್ಯಕಾರರ ಸನ್ನಿಧಿಯಲ್ಲಿ ಅರುಳಪ್ಪಾಡು, ವಗೈರೆ ಗೋಷ್ಠಿ ಮರ್ಯಾದೆಗಳು ಕ್ರಮವರಿತು ನಡೆಯುವುದು. ಆಮೇಲೆ ಶ್ರೀ ಸಂಪತ್ಕುಮಾರರು ಪಲ್ಲಕ್ಕಿಯಲ್ಲಿ ಬಿಜಮಾಡಿ ಗ್ರಾಮ ಪ್ರದಕ್ಷಿಣೆ ಯಿಂದ ಆಸ್ಥಾನಕ್ಕೆ ಹಿಂತಿರುಗುವರು.

ಕೊನೆಯ ದಿವಸ ಅಂದರೆ ಭಾದ್ರಪದ ಬಹುಳ ಬಿದಿಗೆಯದಿನ ಹಗಲು ನಿತ್ಯಕಟ್ಟಲೆ ಶಾತ್ತುಮರೆಜೊತೆಯಲ್ಲಿ ನಾಲ್ಕುವೇದ ಮತ್ತು ತಿರುವಾಯಿಮೊಳಿ ಶಾತ್ತುಮರೆ ಸಹ ನಡೆಯುವುದು. ಮಧ್ಯಾನ್ಹ ನಾಲ್ಕು ಘಂಟೆಗೆ ಪೂರ್ಣಾಹುತಿ, ದ್ವಾರಮಂಡಲಾರ್ಚನೆ, ತಿರುಪವಿತ್ರ ವಿಸರ್ಜನೆ ಯಾಗಿ, ಆಯಾ ಕಟ್ಟಲೆ ಅನುಸರಿಸಿ ಆಳ್ವಾರ್, ಆಚಾರ್ಯರುಗಳ ಸನ್ನಿ ಧಿಗೆ ಮರ್ಯಾದೆಯು ಸಹ ಸಲ್ಲುವುದು ಇದರಂತೆ ಉಳಿದ ಸನ್ನಿಧಿ ಯಲ್ಲಿಯೂ ಕ್ರಮವರಿತು ವಿಸರ್ಜನೆಯಾಗುವುದು ರಾತ್ರಿ ಶ್ರೀ ಉತ್ಸ ವರಿಗೆ ಹುವ್ವಿನ ಪಲ್ಲಕ್ಕಿಯ ಉತ್ಸವವು ನಡೆಯುವುದು. ಅರಮನೆಗೆ ಮತ್ತು ಶ್ರೀಮಠಕ್ಕೆ ಕಳುಹಿಸುವ ಪವಿತ್ರಗಳು ಮೇಲ್ಕಂಡಂತೆ ಧಾರ ಣೆಯಾಗಿ, ಪದ್ಧತಿಯನುಸರಿಸಿ ಆಯಾಯ ಸ್ಥಳಗಳಿಗೆ ಕಳುಹಿಸುವುದಲ್ಲದೆ, ಸ್ಥಳದಲ್ಲಿಯ ಕೈಂಕರ್ಯಪರರಿಗೂ, ದೇವಸ್ಥಾನದ ನೌಕರರಿಗೂ, ಇತ ರರಿಗೂ ಪ್ರಸಾದ ಮರ್ಯಾದೆಯು ನಡೆಯುವುದು.

# ೨೮. ನವರಾತ್ರಿಯು.



ಇದು ಅಶ್ವಯುಜ ಶುದ್ಧ ಪ್ರಥಮೆಯಿಂದ ವಿಜಯದಶಮಿಯ ವರೆಗೆ ನಡೆಯುವುದು. ಆಶ್ವಯುಜ ಶುದ್ಧ ನವಮಿಯ ದಿವಸ (ಅಷ್ಟ ಮಿಾವೇಥೆ ಇಲ್ಲದಿರುವ ದಿವಸ) ಪೂರ್ವಭಾವಿ ಒಂಬತ್ತು ದಿವಸಕ್ಕೆ ಮೊದಲು ದಿವಸ ಶ್ರೀ ಅಮ್ಮನವರಿಗೆ ನವರಾತ್ರಿಯ ಉತ್ಸವದ ಪ್ರಯುಕ್ತ ಅಂಕುರಾರ್ಪಣ ಮುಂತಾದುದು ಡೋಲೋತ್ಸವದ ಮೇರೆಗೆ ನಡೆದು, ಅಶ್ವಯುಜ ಶುದ್ಧ ಪಾಡ್ಯಮಿಯ ದಿವಸ ಶ್ರೀಯವರಿಗೆ ನಿತ್ಯಕಟ್ಟಲೆ ಯಾದ ನಂತರ ಶ್ರೀ ಅಮ್ಮನವರಿಗೆ ಪಂಚಾಮೃತ ಸ್ತ್ರಪನ, ತಳಿಗೆ ನಿವೇದನ, ಯಾಗಶಾಲೆಯಲ್ಲಿ ಹೋಮ ಮುಂತಾದುದು ನಡೆದು, ಶ್ರೀ ಯವರ ಸನ್ನಿಧಿಯಲ್ಲಿ ಬಲಿಪ್ರದಾನ, ಶಾತ್ತುಮರೆ ಮೊದಲಾಗಿ ನಡೆದು, ನಂತರ ಶ್ರೀ ಯದುಗಿರಿಯಮ್ಮನವರ ಸನ್ನಿಧಿಯಲ್ಲಿ ಗೋಷ್ಠಿ ತೀರ್ಥ ವಿನಿಯೋಗವಾಗಿ, ಹೂವಿನ ಪಲ್ಲಕ್ಕಿಯಲ್ಲಿ ಶ್ರೀ ಅಮ್ಮನವರಿಗೆ ಗ್ರಾಮ ಪ್ರದಕ್ಷಿಣೆಯಿಂದ ಉತ್ಸವವಾಗಿ, ವಾಹನ ಮಂಟಪಕ್ಕೆ ಬಿಜಮಾಡಿಸಿ, ಗಜಲಕ್ಷ್ಮೀವಾಹನೋತ್ಸವದಿಂದ ಶ್ರೀ ವೇದಾಂತ ದೇಶಿಕರವರ ಸನ್ನಿಧಿಯ ಮುಂಭಾಗದಲ್ಲ ಬಿಜಮಾಡಿಸಿ, ಅಲ್ಲಿ ವಾಹನದ ಕಟ್ಟಲೆ ತಿರುವಾರಾಧನೆ, ಮಂತ್ರಪುಷ್ಪ, ಅಷ್ಟೋತ್ತರ, ತಳಿಗೆ ನಿವೇದನ, ಆರತಿ, ಇಯಲ್‌ತಿರುವಂದಾದಿ ಶಾತ್ತುಮುರೈ, ಮುಂತಾಗಿ ನಡೆದು ಗೋಷ್ಠೀ ತೀರ್ಥ ವಿನಿಯೋಗವಾಗುವುದು. ತರುವಾಯ ಶ್ರೀ ಅಮ್ಮನವರು ಶ್ರೀ ದೇಶಿಕರವರ ಸನ್ನಿಧಿಯೊಳಗೆ, ಶ್ರೀ ಸ್ತುತಿಯ ಸೇವೆಯೊಡನೆ ಬಿಜಮಾಡಿಸಿ, ಅಲ್ಲಿ ತಿರುವಾರಾಧನೆ, ಶಾತ್ತುಮುರೈ ಮುಂತಾಗಿ ನಡೆದು ಗೋಷ್ಠೀ ತೀರ್ಥ ವಿನಿಯೋಗ ಮುಂತಾಗಿ ನಡೆಯುವುದು. ಆಮೇಲೆ ಆಸ್ಥಾನಕ್ಕೆ ಬಿಜಮಾಡಿಸಿ, ವೇದಪಾರಾಯಣದ ಕಟ್ಟಲೆಯ ತಳಿಗೆ ನಿವೇದನ ಮುಂತಾಗಿ ಜರುಗುವುದು. ಇದೇರೀತಿಯಲ್ಲಿ ಮಹಾನವಮಿಯ ವರೆಗೂ ನಡೆಯುವುದು

ಮಧ್ಯಾಹ್ನಾತ್ಪರ ಶ್ರೀಯವರು ಹಸ್ತನಕ್ಷತ್ರದ ದಿವಸ ಸ್ಥಳ ಮಹಾತ್ಮ್ಯದ ಪುರಾಣಕ್ಕೆ ತೊಡಕದ ಉದ್ದಿಶ್ಯ ಶ್ರೀ ಕಲ್ಯಾಣಿಯ ಬಳಿಯಲ್ಲಿರುವ ಗಜೇಂದ್ರವರದನ ಸನ್ನಿಧಿಗೆ ಬಿಜಮಾಡಿ, ಅಲ್ಲಿ ತಿರುವಾರಾಧನೆ, ಆರತಿ ಮುಂತಾದುದು ನಡೆದ ನಂತರ, ಯಾದವಗಿರಿ ಮಹಾತ್ಮ್ಯದ ಒಂದೊಂದು ಅಧ್ಯಾಯವನ್ನು ಒಂದೊಂದು ದಿವಸದಂತೆ ಪಾರಾಯಣ ಶ್ರವಣವಾಗಿ, ತರುವಾಯ ಆರತಿ, ರಾಜಾಶೀರ್ವಾದ, ಗೋಷ್ಠಿ ತೀರ್ಥ, ವಿನಿಯೋಗ ಮುಂತಾದುದು ಕ್ರಮವರಿತು ನಡೆಯುವುದು. ಇದೇರೀತಿಯಲ್ಲಿ ಹನ್ನೆರಡು ದಿವಸಗಳೂ ನಡೆದು, ಕೊನೆಯ ದಿವಸ ಅಂದರೆ ಆಶ್ವಯುಜ ಮಾಸದ ಶತಭಿಷಾನಕ್ಷತ್ರದ ದಿವಸ, ಹನ್ನೆರಡು ಅಧ್ಯಾಯಗಳ ಪಾರಾಯಣ ಶ್ರವಣವಾಗಿ, ಶಾತ್ತುಮುರೈ ಮುಂತಾದುದು ಜರುಗುವುದು. ಆಮೇಲೆ ಶ್ರೀಯವರು ದೇವಸ್ಥಾನಕ್ಕೆ ಬಿಜಮಾಡಿ, ಶ್ರೀ ಅಮ್ಮನವರ ಸನ್ನಿಧಿಯ ರಂಗಮಂಟಪದಲ್ಲಿ ಉಭಯನಾಚ್ಯಾರವರೂ, ಶ್ರೀ ರಾಮಾನುಜಾಚಾರ್ಯರ ಸಮೇತ ರಾತ್ರಿ ಕಟ್ಟಲೆಯ ಅಷ್ಟೋತ್ತರ, ಮುಂತಾಗಿ ನಡೆದು, ಶ್ರೀಯವರ ಸನ್ನಿಧಿಯಲ್ಲಿ ಧನ ಪೂಜೆಯಾಗಿ, ಆಚಾರ್ಯಪುರುಷರೇ ಮುಂತಾದವರಿಗೆ ಶ್ರೀ ಯದುಗಿರಿಯಮ್ಮನವರ ಸನ್ನಿಧಿಯಲ್ಲಿಯೂ, ಶ್ರೀಯವರ ಸನ್ನಿಧಿಯಲ್ಲಿಯೂ, ಕ್ರಮ ಪ್ರಕಾರ ಮರ್ಯಾದೆಗಳು ನಡೆದು, ಗೋಷ್ಠೀ ತೀರ್ಥ ವಿನಿಯೋಗ ಮುಂತಾಗಿ ಜರುಗಿ, ಆಸ್ಥಾನಕ್ಕೆ ಶ್ರೀಯವರು ಬಿಜಮಾಡಿಸುತ್ತಾರೆ.

## ಮಹಾನವಮಿ

ಈ ದಿವಸ ಶ್ರೀ ಅಮ್ಮನವರಿಗೆ ಉತ್ಸವವಾಗಿ, ನಂತರ ಶ್ರೀಯವರುಗಳ ಆಯುಧಗಳು ಮತ್ತು ಕುದುರೆಯ ವಾಹನದೊಂದಿಗೆ ಕಲ್ಯಾಣಿಗೆ ಬಿಜಮಾಡಿ ಅಲ್ಲಿ ಆಯುಧಪೂಜೆ, ಅಶ್ವಪೂಜೆ ಮುಂತಾಗಿ ನಡೆದು ದೇವಸ್ಥಾನಕ್ಕೆ ಹಿಂತಿರುಗುವರು. ತರುವಾಯ ಶ್ರೀ ಅಮ್ಮನವರ ಸನ್ನಿಧಿಯಲ್ಲಿ ಪೂರ್ಣಾಹುತಿ, ತೀರ್ಥ ಶಾತ್ತುಮುರೈ ಮುಂತಾದುದು ನಡೆಯುವುದು.

ಮಧ್ಯಾಹ್ನ ನಾಲ್ಕು ಘಂಟೆಗೆ ಶ್ರೀಯವರು ಉಭಯನಾಚ್ಯಾರ್ರವರ ಮತ್ತು ಶ್ರೀ ಭಾಷ್ಯಕಾರರ ಸಮೇತ ಉಗ್ರಾಣಕ್ಕೆ ಬಿಜಮಾಡಿ, ತಿರುವಾರಾಧನೆ ಮುಂತಾದುದು ನಡೆದು, ಸ್ಥಳ ಮಹಾತ್ಮ್ಯೆ ಪುರಾಣವು ಪಠನ ವಾಗುವುದು.

ರಾತ್ರಿ ನಿತ್ಯಕಟ್ಟಲೆ, ಜಾಳಿಗೆಪೂಜೆ ಮುಂತಾಗಿ ನಡೆದು ನಂತರ ಶ್ರೀಯವರು ಆಸ್ಥಾನಕ್ಕೆ ಬಿಜಮಾಡಿ, ಶ್ರೀಯವರಿಗೂ, ಶ್ರೀಯವರ ಆಯುಧಗಳಿಗೂ, ಪೂಜೋಪ ಕರಣಗಳಿಗೂ, ಪೂಜೆ ಮುಂತಾದುದು ಜರುಗುವುದು. ಹಾಗೆಯೇ ಶ್ರೀ ಚಲುವರಾಯಸ್ವಾಮಿ, ಶ್ರೀ ಅಮ್ಮನ ವರು, ಮತ್ತು ಇತರ ಸುತ್ತಲು ಗುಡಿಯಲ್ಲಿಯೂ ಇದೇರೀತಿ ಪೂಜೆಯೂ ನಡೆಯುವುದು. ಆಮೇಲೆ ಕ್ಷೀರಾನ್ನ ಮುಂತಾದುದು ನಿವೇದನವಾಗಿ, ವಿನಿಯೋಗವಾದ ನಂತರ, ಕಾರ್ಯಕಲಾಪವು ನೆರವೇರುವುದು.

## ವಿಜಯದಶಮಿಯ ಉತ್ಸವವು.

---

ಈ ದಿವಸ ಶ್ರೀ ತಿರುನಾರಾಯಣಸ್ವಾಮಿ ಮತ್ತು ಶ್ರೀ ಸಂಪತ್ಕುಮಾರರಿಗೆ ಜಂಬೂಸವಾರಿ ಪ್ರಯುಕ್ತ ಅಲಂಕಾರಗಳು ನಡೆದು, ಮಧ್ಯಾಹ್ನಾತ್ಪರ ಕುದುರೆಯ ವಾಹನಗಳ ಮೇಲೆ ಶ್ರೀ ಉತ್ಸವರು ಬನ್ನಿಮಂಟಪಕ್ಕೆ ಬಿಜಮಾಡಿ, ಅಲ್ಲಿ ಶಮೀಪೂಜೆ, ಬಾಣಪ್ರಯೋಗ ಮುಂತಾದುದು ಶಾಸ್ತ್ರರೀತಿಯಲ್ಲಿ ನಡೆದು, ತಳಿಗೆ ನಿವೇದನ, ಆರತಿ, ತೀರ್ಥ ವಿನಿಯೋಗ ಮುಂತಾಗಿ ನಡೆದು ಶ್ರೀಯವರು ಗ್ರಾಮಕ್ಕೆ ಅಂದರೆ ಹೆಬ್ಬಾಗಿಲಿನಿಂದ ಈಚೆಗೆ ದಯಮಾಡಿಸುವ ಸಂದರ್ಭದಲ್ಲಿ ಶ್ರೀ ಅಮ್ಮನವರು ಗಜಲಕ್ಷ್ಮೀವಾಹನಕ್ಕೆ ಬಿಜಮಾಡಿ, ಶ್ರೀಯರನ್ನು ಎದುರುಗೊಂಡು ಗ್ರಾಮಪ್ರದಕ್ಷಿಣೆಯಾಗಿ, ಆಸ್ಥಾನಕ್ಕೆ ಬಿಜಮಾಡಿ, ಶ್ರೀಯವರ ಬೊಕ್ಕಸದ ಬಾಗಿಲಿಗೆ ದಯಮಾಡಿ, ಅಲ್ಲಿಯೂ ಯಾದವಗಿರಿ ಮಹಾತ್ಮ್ಯೆ ಪುರಾಣ ಶ್ರವಣವಾಗಿ, ಆಸ್ಥಾನಕ್ಕೆ ದಯಮಾಡಿಸಿದ ನಂತರ, ನಿತ್ಯಕಟ್ಟಲೆಯು ನಡೆಯುದು.

## ೨೯. ಶ್ರೀ ಜೀಯರ್‌ರವರ ತಿರುನಕ್ಷತ್ರವು.



ಇದು ತುಲಾಮಾಸ ಆಶ್ಲೇಷಾನಕ್ಷತ್ರದಿಂದ ಮೂಲಾನಕ್ಷತ್ರದ ವರೆಗೆ ಹನ್ನೊಂದು ದಿವಸಗಳು ನಡೆಯುವುದು.

ಈನಕ್ಷತ್ರದಲ್ಲಿನ ಕಟ್ಟಲೆಯು ಶ್ರೀ ವೇದಾಂತ ದೇಶಿಕರವರ ತಿರುನಕ್ಷತ್ರದ ನಿತ್ಯಕಟ್ಟಲೆಯಂತೆ ನಡೆದು, ಪ್ರತಿದಿವಸವೂ ಶ್ರೀಮದಾಚಾರ್ಯರವರ ಸನ್ನಿಧಿಯಲ್ಲಿ ತಿರುವಾರಾಧನೆ, ಆರತಿ, ಸೇವಾಕಾಲ, ಶಾತ್ತುಮುರೆ, ಮಾಲೆ, ಪರಿವಟ್ಟ ಮುಂತಾಗಿ ಗೋಷ್ಠಿ ವಿನಿಯೋಗವಾಗುವುದು.

ಈ ಸನ್ನಿಧಿಯಲ್ಲಿ, ಶ್ರೀ ದೇಶಿಕರವರ ಸನ್ನಿಧಿಯಂತೆ, ಪ್ರತಿನಿತ್ಯವೂ ಐದಾರು ಜನ ಪರಸ್ಥಳದವರಿಗೆ, ಶ್ರೀಯುವರಿಗೆ ನಿವೇದನವಾದ ನಂತರ, ಸಮಾರಾಧನೆಯು ನಡೆಯುವುದು.

ಇದೂ ಅಲ್ಲದೆ ಅನೇಕ ಭಕ್ತಾದಿಗಳು ಪುದುವಟ್ಟು ಮೂಲಕವಾಗಿಯೂ, ಇತರ ವಿಧವಾಗಿಯೂ ಸೇವಾರ್ಥಗಳನ್ನು ಬಹಳ ಭಕ್ತಿ ಪರಸ್ಸರವಾಗಿ ನಡೆಸಿಕೊಂಡು ಬರುತ್ತಲಿರುವರು.

## ೩೦. ಶ್ರೀ ಪಿಳ್ಳೈಲೋಕಾಚಾರ್ಯರ ತಿರುನಕ್ಷತ್ರವು.



ಇದು ತುಲಾಮಾಸ ಉತ್ತರಾನಕ್ಷತ್ರದಿಂದ ಶ್ರವಣನಕ್ಷತ್ರದ ವರೆಗೆ ಹನ್ನೊಂದು ದಿವಸಗಳು ನಡೆಯುವುದು

ಇದು ಶ್ರೀ ಜೀಯರ್‌ರವರ ತಿರುನಕ್ಷತ್ರದ ಕಟ್ಟಲೆಯಂತೆ ನಡೆಯುವುದು

## ೩೧. ನರಕ ಚತುರ್ದಶಿಯು.



ಇದು ಆಶ್ವಯುಜ ಬಹುಳ ಚತುರ್ದಶಿಯಲ್ಲಿ ನಡೆಯುವುದು.

ಈ ದಿವಸ ಬೆಳಗಿನ ಝಾವದಲ್ಲಿ ಶ್ರೀಯವರಿಗೆ ಪಂಚಾಮೃತಾಭಿಷೇಕವೂ, ಎರಡನೆಯ ಸಾಮ್ಯದ ಸ್ಥಾನೀಕರ ಸೇಮಿ ಸೇವಾರ್ಥ ಸಹ ನಡೆಯುವುದು. ಮೂರನೆಯ ದಿವಸ ಸಾಯಂಕಾಲ ಶ್ರೀಯವರು ೨ ನೆಯ ಸಾಮ್ಯದ ಸ್ಥಾನೀಕರ ಮಂಟಪಕ್ಕೆ ಬಿಜಮಾಡಿ, ಅಲ್ಲಿ ಮಂಟಪೋತ್ಸವದ ಕಟ್ಟಲೆಯು ನಡೆದು ಗ್ರಾಮ ಪ್ರದಕ್ಷಿಣೆಯಿಂದ, ಆಸ್ಥಾನಕ್ಕೆ ದಯಮಾಡಿಸುವರು

## ೩೨. ದೀಪಾವಳಿಯು.



ಇದು ಕಾರ್ತಿಕ ಶುದ್ಧ ಪ್ರಥಮೆಯ ದಿವಸ ಬರುವುದು.

ಯುಗಾದಿಯಲ್ಲಿ ನಡೆಯುವಂತೆ ಶ್ರೀಯವರಿಗೂ, ಶ್ರೀ ಅಮ್ಮನವರಿಗೂ ಸಹ ಪಂಚಾಮೃತ ಸ್ನಪನ ಮುಂತಾಗಿ ನಡೆಯುವುದು. ಈ ದಿವಸ ಸನ್ನಿಧಿಯ ಪರಿಚಾರಕರ ಸೇಮಿ ಸೇವಾರ್ಥ ಸಹ ನಡೆಯುವುದು ಮಧ್ಯಾಹ್ನ ಶ್ರೀಯವರಿಗೆ ಶೇಷ ವಾಹನೋತ್ಸವವು ನಡೆಯುವುದು

## ೩೩. ಅಷ್ಟತೀರ್ಥೋತ್ಸವವು ಮತ್ತು ಶ್ರೀ ರಾಜಮುಡಿಯ ಉತ್ಸವವು.



ಇದು ಕಾರ್ತಿಕ ಶುದ್ಧ ಅನೂರಾಧಾನಕ್ಷತ್ರದಿಂದ ಅಶ್ವನಿ ನಕ್ಷತ್ರದವರೆಗೆ ನಡೆಯುವುದು. ಹೇಗಂದರೆ ರಾಜಮುಡಿ ಉತ್ಸವವು ಧನಿಷ್ಠಾ ನಕ್ಷತ್ರದಲ್ಲಿಯೂ, ಅಷ್ಟ ತೀರ್ಥೋತ್ಸವವು ಕಾರ್ತಿಕ ಶುದ್ಧ ದಶಮಿ

ಯಲ್ಲಿಯೂ, ರಥೋತ್ಸವವು ಉತ್ತರಾಭಾದ್ರಪದ ನಕ್ಷತ್ರದಲ್ಲಿಯೂ, ಮತ್ತು ಅವಭೃತವು ಅಶ್ವಿನಿ ನಕ್ಷತ್ರದಲ್ಲಿಯೂ, ಬಹಳ ವಿಜೃಂಭಣೆಯಿಂದ ನಡೆಯುವುವು.

ಶ್ರೀ ರಾಜಮುಡಿಯ ಮಹೋತ್ಸವವು ಕಾರ್ತೀಕ ಮಾಸದ ಅಶ್ವಿನಿ ನಕ್ಷತ್ರಕ್ಕೆ ಹನ್ನೊಂದು ದಿವಸ ಪೂರ್ವಭಾವಿಯಾಗಿ ಡೋಲೋತ್ಸವದ ಪ್ರಕಾರ ಅಂಕುರಾರ್ಪಣವಾಗಿ, ಮಿಕ್ಕ ಉತ್ಸವಗಳೆಲ್ಲವೂ ಶ್ರೀ ಕೃಷ್ಣ ರಾಜಮುಡಿಯ ಉತ್ಸವಗಳಂತೆ ಬಹಳ ವಿಜೃಂಭಣೆಯಿಂದ ಜರುಗುವುದು. ಶ್ರೀ ರಾಜಮುಡಿಯ ಕಿರೀಟ ಧಾರಣೆಯು ಶ್ರೀಯವರ ದೇವಸ್ಥಾನದಲ್ಲಿಯೇ ನಡೆಯುವುದು.

ಒಂದನೆಯ ತಿರುನಾಳ್. ಧ್ವಜಾರೋಹಣದ ದಿವಸದಿಂದ ಅವಭೃತ ಸ್ನಾನದ ವರೆಗೆ ಶ್ರೀ ಶಠಾರಿಯವರನ್ನು ಒಂದೊಂದು ಪುಣ್ಯತೀರ್ಥಕ್ಕೆ ಬಿಜಮಾಡಿಸಿ, ಅಲ್ಲಲ್ಲಿ ಆಯಾ ತೀರ್ಥದ ಮಹಿಮೆಯ ಪುರಾಣ ಶ್ರವಣ ವಾಗಿ, ಆಸ್ಥಾನಕ್ಕೆ ಹಿಂತಿರುಗುವರು

ಕಾರ್ತೀಕ ಶುದ್ಧ ದಶಮಿಯ ದಿನಸೆ ಶ್ರೀ ಸಂಪತ್ಕುಮಾರರು ಶ್ರೀ ರಾಜಮುಡಿಯ ತಿರುವಾಭರಣ ಧಾರಣೆಯಿಂದ, ನಿತ್ಯಕಟ್ಟಲೆ ಮುಂತಾಗಿ ನಡೆದ ತರುವಾಯ ಶ್ರೀ ಶಠಾರಿಯವರನ್ನು ಗ್ರಾಮ ಪ್ರದಕ್ಷಿಣೆಯಿಂದ ಶ್ರೀ ವೇದಾಂತ ದೇಶಿಕರವರ ಸನ್ನಿಧಿಗೆ ಬಿಜಮಾಡಿಸಿ, ಅಲ್ಲ ಪಾದುಕಾಸಹ ಸ್ರಕ್ಕೆ ತೊಡಕವಾಗಿ, ಯತಿರಾಜಸಪ್ತತಿ, ಶಾತ್ತುಮುರ್ರೆಯಾಗಿ, ದೇವಸ್ಥಾ ನದ ಬಾಗಿಲಿಗೆ ದಯಮಾಡುವರು. ಆಮೇಲೆ ಶ್ರೀಯವರು ಚತುಸ್ಥಾ ನಾರ್ಚನೆಯ ಪೂರ್ವಕವಾಗಿ ಕಲ್ಯಾಣಿಗೆ ದಯಮಾಡಿ, ಅಲ್ಲಿ ಶ್ರೀ ಶಠಾರಿ ಯವರಿಗೆ ಕರ್ಮಾಂಗ ಸ್ನಪನ, ಕಲ್ಯಾಣಿಪೂಜೆ, ಶ್ರೀ ಮಠ ಮುಂತಾಗಿ ರಾಜಮರ್ಯಾದೆಗಳು, ಕ್ರಮಪ್ರಕಾರ ನಡೆದ ನಂತರ ಅಭಿಷೇಕವಾಗಿ, ವಿಧ್ಯುಕ್ತವಾಗಿ ಅವಭೃತ ಸ್ನಾನವಾದ ಬಳಿಕ, ಶ್ರೀಯವರ ಸನ್ನಿಧಿಗೆ ಬಿಜಮಾಡುವರು. ಆಮೇಲೆ ಆರತಿ, ಅರುಳಪ್ಪಾಡು, ನಿವೇದನ, ವಿನಿ ಯೋಗ ಮುಂತಾದುದು ನಡೆಯುವುದು. ತರುವಾಯ ಶ್ರೀ ಶಠಾರಿಯವ

ರನ್ನು ವೇದಪುಷ್ಕರಣಿಗೂ, ಧನುಷ್ಕೋಟಿಗೂ, ಯಾದವ, ದರ್ಭ, ಪಲಾಶ, ಪದ್ಮ, ಮೈತ್ರೇಯ ಮತ್ತು ನಾರಾಯಣ ತೀರ್ಥಕ್ಕೂ, ವೈಕುಂಠಗಂಗೆಗೂ, (ತೊಟ್ಟಿಲ ಮ ಡು ವ) ಬಿಜಮಾಡಿಸಿ, ಅಲ್ಲಲ್ಲಿ ನ್ಯೂನತಾತಿರಿಕ್ತಗಳಿಲ್ಲ ದಂತೆ ಅವಭೃತವಾಗಿ, ನಂತರ ಗಿರಿಪ್ರದಕ್ಷಿಣೆಯಿಂದ, ಶ್ರೀಯವರು ಶ್ರೀ ಜೀಯರವರ ಸನ್ನಿಧಿಗೆ ದಯಮಾಡಿ, ಅಲ್ಲ ಶ್ರೀ ವಚನಭೂಷಣ ಪಾರಾಯಣಕ್ಕೆ ತೊಡಕವಾಗಿ, ಯತಿರಾಜವಿಂಶತಿ ಶಾತ್ತುಮುರೈಯಾಗಿ, ಶ್ರೀ ಶಠಾರಿಯವರು ಶ್ರೀಯವರ ಆಸ್ಥಾನಕ್ಕೆ ಹಿಂತಿರುಗುವರು. ವೇದ ಪಾರಾಯಣದ ಗೋಷ್ಠಿಯೇ ಮುಂತಾದವರಿಗೆ ಶ್ರೀ ಶಠಾರಿ, ತೀರ್ಥ ಮುಂತಾದುದು ನಡೆಯುವುದು.

ಅಶ್ವಿನಿ ನಕ್ಷತ್ರವಾದ ಅವಭೃತದ ದಿವಸ ಕಲ್ಯಾಣಿಯಲ್ಲ ಅವಭೃತ ಸ್ನಾನವಾದ ನಂತರ ಶ್ರೀಯವರು ಗ್ರಾಮ ಪ್ರದಕ್ಷಿಣೆಯಿಂದ ಶ್ರೀ ವೇದಾಂ ತಾಚಾರ್ಯರ ಸನ್ನಿಧಿಗೆ ದಯಮಾಡಿ, ಅಲ್ಲ ಪಾದುಕಾ ಸಹಸ್ರದ ಶಾತ್ತು ಮುರೈ ನಡೆಯುವುದು. ತರುವಾಯ ಗ್ರಾಮ ಪ್ರದಕ್ಷಿಣೆಯಿಂದ ಶ್ರೀ ಜೀಯ ರವರ ಸನ್ನಿಧಿಗೆ ಬಿಜಮಾಡಿ, ಶ್ರೀ ವಚನಭೂಷಣದ ಶಾತ್ತುಮುರೈ ಮುಂ ತಾಗಿ ನಡೆದ ತರುವಾಯ, ಆಸ್ಥಾನಕ್ಕೆ ಹಿಂತಿರುಗುವರು.

## ೩೪. (a) ಶ್ರೀ ತಿರುಪ್ಪಾಣಿಯಾಳ್ವಾರ್ ತಿರುನಕ್ಷತ್ರವು.

ಇದು ವೃಶ್ಚಿಕಮಾಸ ಪೂರ್ವಾಷಾಢ ನಕ್ಷತ್ರದಿಂದ ಕೃತ್ತಿಕೆಯ ವರೆಗೆ, ಇತರ ನಕ್ಷತ್ರದ ಕಟ್ಟಳೆಯಂತೆ ನಡೆಯುವುದು.

## (b) ಶ್ರೀ ವಿಷ್ವಕ್ಸೇನರ್ ತಿರುನಕ್ಷತ್ರವು.



ಇದು ತುಲಾಮಾಸ ಪೂರ್ವಾಷಾಢ ನಕ್ಷತ್ರದಲ್ಲ, ಇತರ ತಿರುನಕ್ಷ ತ್ರದ ಕಟ್ಟಳೆಯಂತೆ ನಡೆಯುವುದು.

# ೩೫. ಕೃತ್ತಿಕೋತ್ಸವವು.



ಇದು ವೃಶ್ಚಿಕಮಾಸದ ಪೌರ್ಣಮಿಯಲ್ಲಿ, ನಡೆಯುವುದು.

ಈದಿವಸ ರಾತ್ರಿ ನಿತ್ಯಕಟ್ಟಲೆಯಾದ ನಂತರ ದೀಪಾರಾಧನೆ ಗೋಸುಗ, ಸಭಾನುಜ್ಞೆ, ಪುಣ್ಯಾಹ ಪ್ರೋಕ್ಷಣ, ಪಂಚಗವ್ಯಪ್ರೋಕ್ಷಣ, ಮುಂತಾಗಿ ನಡೆದು ಯಾಗಶಾಲೆಯಲ್ಲಿ ಕೃತ್ತಿಕೋತ್ಸವದ ಪ್ರಯುಕ್ತ ಹೋಮ ಮುಂತಾದುದು ನಡೆದು, ಘಟದೀಪ ಪ್ರಜ್ವಲನೆಯಿಂದ ಆಗ ಮಿಾಕರು, ಸನ್ನಿಧಿಯ ಪರಿಚಾರಕರು, ವೇದಪಾರಾಯಣದವರ ಮೂಲಕ, ಮುಂದುಗಡೆಯಲ್ಲಿ ಕರಗವಂ ಬಿಟ್ಟುಕೊಂಡು, ಸಮಸ್ತ ವಾದ್ಯ ಬಿರುದಾ ವಳಿಗಳೊಂದಿಗೆ ಶ್ರೀ ತಿರುನಾರಾಯಣ ಸ್ವಾಮಿಯವರ ಸನ್ನಿಧಿಗೆ ಬಂದು, ಅಲ್ಲಿ ಅಲಂಕಾರ, ತಿರುವಾರಾಧನೆ, ಮುಹೂರ್ತ, ಮಠಮರ್ಯಾದೆ, ರಾಜ ಮರ್ಯಾದೆ ಮುಂತಾದವು ನಡೆದು, ಶ್ರೀಯವರಿಗೆ ವೇದಘೋಷ ಪುರಸ್ಸರ ವಾಗಿ, ಘಟಾರ್ತಿಯ ಸಮರ್ಪಣೆಯಾಗುವುದು

ಇದೇ ರೀತಿಯಾಗಿ ಶ್ರೀ ಸಂಪತ್ಕುಮಾರರ ಸನ್ನಿಧಿಯಲ್ಲಿಯೂ, ಶ್ರೀ ಯದುಗಿರಿಯಮ್ಮನವರ ಸನ್ನಿಧಿಯಲ್ಲಿಯೂ ಸಹ ನಡೆಯುವುದು ಆಮೇಲೆ ಶ್ರೀ ಚಲುವರಾಯ ಸ್ವಾಮಿಯವರು ಒಳ ಪ್ರಾಕಾರದಲ್ಲಿ ಚತು ಸ್ಥಾನಾರ್ಚನ ಪೂರ್ವಕವಾಗಿ ಗೋಪುರದ ಬಾಗಿಲಿಗೆ ದಯಮಾಡಿ, ಅಲ್ಲಿ ಅಂಗಲೀಕನಿಂದ ಸಮರ್ಪಿಸಲ್ಪಟ್ಟ ಪುಷ್ಪಧಾರಣೆಯಾಗಿ, ತಳಿಗೆಯ ನಿವೇದನ ಮುಂತಾದುದು ನಡೆದು, ದೀಪಸ್ತಂಭದ ಮೇಲೆ ದೀಪಾರಾಧನೆಯಾಗಿ, ನಂ ತರ ವಾಹನ ಮಂಟಪಕ್ಕೆ ಬಿಜಮಾಡಿಸುವ ಸಂದರ್ಭದಲ್ಲಿ, ಶ್ರೀ ಉತ್ಸ ವರು ಗೋಪುರದ ಬಾಗಿಲಿಗೆ ಅಭಿಮುಖರಾಗಿ ಬಿಜಮಾಡಿ, ಗೋಪುರದ ಮೇಲಿನಿಂದ ಚೊಕ್ಕಪಾನೆಯನ್ನು ಹಚ್ಚುವರು. ನಂತರ ಶ್ರೀಯವರು ವಾಹನೋತ್ಸವದಿಂದ ಗ್ರಾಮ ಪ್ರದಕ್ಷಿಣೆಯಂ ಮಾಡಿಕೊಂಡು, ಆಸ್ಥಾ ನಕ್ಕೆ ಹಿಂತಿರುಗುವರು ಅಲ್ಲಿ ನಮ್ಮಾಳ್ವಾರ್, ತಿರುಮಂಗೈಯಾ

ಳ್ವಾರ್, ಶ್ರೀ ರಾಮಾನುಜಾಚಾರ್ಯರು, ಶ್ರೀ ಚಲುವರಾಯ ಸ್ವಾಮಿಯವರ ಸಮ್ಮುಖಕ್ಕೆ ದಯಮಾಡಿ, ಇವರುಗಳಿಗೆ ಅರುಳಪ್ಪಾಡು, ತಿರುಪರಿವಟ್ಟ, ತಿರುಮಾಲೆ, ಶ್ರೀ ಶಠಾರಿ ಮುಂತಾದ ಮರ್ಯಾದೆಗಳು ಸಲ್ಲುವುವು. ಇದರಂತೆ ಗೋಷ್ಠಿಗೂ ಶ್ರೀ ಶಠಾರಿಯಾಗಿ, ಇಯಲ್ ಗೋಷ್ಠಿಯವರಿಗೆ ಅರುಳಪ್ಪಾಡಾಗಿ, ಪ್ರಬಂಧ ಸೇವಾಕಾಲ, ನಿವೇದನ, ವಿನಿಯೋಗ ಮುಂತಾದುದು ಜರುಗಿದ ನಂತರ, ಆಳ್ವಾರ್ ಮತ್ತು ಆಚಾರ್ಯರು ತಮ್ಮ ತಮ್ಮ ಆಸ್ಥಾನಗಳಿಗೆ ದಯಮಾಡಿಸುವರು.

## ೩೬. ಪುಷ್ಪ ಬೃಂದಾವನೋತ್ಸವವು.



ಇದು ಕಾರ್ತಿಕ ಶುದ್ಧ ದ್ವಾದಶಿಯ ದಿವಸ ನಡೆಯುವುದು. ಈ ದಿವಸ ರಾತ್ರಿ ಶ್ರೀ ಉತ್ಸವರಿಗೆ ಪುಷ್ಪ ಬೃಂದಾವನದ ವಾಹನದ ಮೇಲೆ ಉತ್ಸವವು ನಡೆದು, ನಂತರ ಪ್ರಾಕಾರದ ಬಳಿಯಲ್ಲಿರುವ ಬೃಂದಾವನಕ್ಕೆ ಬಿಜಮಾಡಿ, ಅಲ್ಲಿ ತಿರುವಾರಾಧನೆ, ಆರತಿ, ತಳಿಗೆಯ ನಿವೇದನ ಮುಂತಾಗಿ ಜರುಗಿದ ತರುವಾಯ ಆಸ್ಥಾನಕ್ಕೆ ದಯಮಾಡಿಸುವರು.

## ೩೭. ಕೈಶಿಕ ದ್ವಾದಶಿಯು.



ಇದು ವೃಶ್ಚಿಕ ಮಾಸದಲ್ಲಿಯ ಶುದ್ಧ ದ್ವಾದಶಿಯಲ್ಲಿ ಬರುತ್ತದೆ. ಈ ದಿವಸ ಶ್ರೀಯವರ ಸಹಸ್ರನಾಮಾರ್ಚನೆಯು ನಡೆದ ನಂತರ, ಶ್ರೀ ಚಲುವರಾಯ ಸ್ವಾಮಿಯವರ ಸನ್ನಿಧಿಯಲ್ಲಿ ಹನ್ನೆರಡು ತಿರುವಾರಾಧನೆಯಿಂದ ಹನ್ನೆರಡು ಕುಲಾವಿ, ಕಪಾಯಿಗಳನ್ನು ಧರಿಸಿ, ಆರತಿ, ನಿವೇದನವಾದ ಬಳಿಕ ಕೈಶಿಕ ಪುರಾಣವು, ಪಠನೆ ಯಾದನಂತರ, ಶ್ರೀಯವರಿಗೆ ಆರತಿ, ಶಾತ್ತುಮುರೈ, ನಿವೇದನ ಮುಂತಾದುದು ನಡೆಯುವುದು.

# ೩೮. ಚಿಕ್ಕ ಉಯ್ಯಾಲೋತ್ಸವವು.



ಇದು ಜೇಷ್ಠ ಬಹುಳ ಏಕಾದಶಿಯಿಂದ ತ್ರಯೋದಶಿ ವರೆಗೆ ಮೂರು ದಿವಸಗಳು, ದೊಡ್ಡ ಉಯ್ಯಾಲೆಯ ಉತ್ಸವದಂತೆ ನಡೆಯುವುದು. ಶ್ರೀ ತಿರುನಾರಾಯಣ ಸ್ವಾಮಿಯವರ ಸನ್ನಿಧಿಯ ರಂಗಮಂಟಪದಲ್ಲಿ ಉಯ್ಯಾಲೆಯಂ ಕಟ್ಟಿ, ಉತ್ಸವವು ನಡೆಯುವುದು. ಇದು ಪ್ರೇಕ್ಷಕರಿಗೆ ನೇತ್ರಾನಂದವನ್ನು ಉಂಟುಮಾಡುವುದು.

# ೩೯. ಧನುರ್ಮಾಸದ ಕಟ್ಟಲೆಯು ಮತ್ತು ಶ್ರೀ ಅಮ್ಮನವರ ಥಡಾ ಉತ್ಸವವು.



ಧನುಸ್ಸಂಕ್ರಮಣವು ಹುಟ್ಟಿದಕಾಲದಲ್ಲಿ ಶ್ರೀಯವರಿಗೆ ಕರ್ಮಾಂಗ ಸ್ನಪನ, ಅಲಂಕಾರ, ತಿರುವಾರಾಧನೆ, ದೀಪ, ಧೂಪ ಸಮರ್ಪಣೆ, ಜಿತಂತಾಸ್ತೋತ್ರ ಪಠನಪೂರ್ವಕವಾಗಿ, ಶ್ರೀ ಚಲುವರಾಯ ಸ್ವಾಮಿಯವರಿಗೂ, ತಿರುವಾರಾಧನೆ ಯಾದನಂತರ ಶ್ರೀ ನಮ್ಮಾಳ್ವಾರ್, ತಿರುಮಂಗೈಯಾಳ್ವಾರ್, ಶ್ರೀ ರಾಮಾನುಜಾಚಾರ್ಯರಿಗೂ ತಿರುವಾರಾಧನೆ, ದೀಪ, ಧೂಪ ಸಮರ್ಪಣೆಯಾದ ನಂತರ ಕೃತ್ತಿಕೋತ್ಸವದ ಪ್ರಕಾರ ಇವರುಗಳಿಗೆ ಅರುಳಪ್ಪಾಡು, ಮುಂತಾಗಿ ಜರುಗಿದ ತರುವಾಯ, ಇಯಲ್ ಗೋಷ್ಠಿಗೆ ಅರುಳಪ್ಪಾಡಾಗಿ, ನಿತ್ಯಾನುಸಂಧಾನ, ಗದ್ಯತ್ರಯ, ಪ್ರಬಂಧಗಳನ್ನು ಸೇವಾಕಾಲ ಮಾಡುವರು. ಆಮೇಲೆ ತಳಿಗೆಯ ನಿವೇದನವಾಗಿ, ತಿರುಪ್ಪಾವೈನಾಳ್‌ಪಾಟ್ ಶಾತ್ತುಮುರೈ ನಡೆದು ಗೋಷ್ಠಿಗೆ ತೀರ್ಥ ಮುಂತಾಗಿ, ಇತರೆ ಸುತ್ತು ಗುಡಿಗಳಲ್ಲಿ ಸಹ ನಾಳ್‌ಪಾಟ್, ಶಾತ್ತುಮುರೈ ನಡೆಯುವುದು

ಧನುರ್ಮಾಸದ ಒಂದನೆಯ ತೇದಿ ರಾತ್ರಿ ನಿತ್ಯಕಟ್ಟಳೆಯಾಗಿ, ಮೇಲ್ಕಂಡ ಪ್ರಕಾರ ಆಳ್ವಾರುಗಳಿಗೆ ಅರುಳಪ್ಪಾಡು ಮುಂತಾದುದು ನಡೆದು, ನೇಮಿ ಸೇವಾರ್ಥಗಾರರ ಸೇವೆಯು ನಡೆದು, ತಳಿಗೆಯು ನಿವೇದನವಾಗಿ ತಿರುಪ್ಪಲ್ಲಾಂಡು ತೊಡಕವಾಗುವುದು. ತರುವಾಯ 4000 ದಿವ್ಯ ಪ್ರಬಂಧಸೇವಾ ಕಾಲಕ್ಕೆ ಪ್ರಾರಂಭಮಾಡುವರು ಆಮೇಲೆ ಗೋಷ್ಠಿಗೆ ವಿನಿಯೋಗ ಮುಂತಾದುದು ನಡೆಯುವುದು ಮಾರನೆಯ ದಿವಸ ಸಾಯಂಕಾಲ ಶ್ರೀ ಯದುಗಿರಿಯಮ್ಮನವರ ಸನ್ನಿಧಿಯಲ್ಲಿ ಸಹ ತಿರುಪ್ಪಲ್ಲಾಂಡು ತೊಡಕವಾಗುವುದು. ಇದೇ ರೀತಿಯಲ್ಲಿ ಧನುರ್ಮಾಸ ಪೂರ್ತಿಯಾಗಿ ಬಹಳ ಶ್ರದ್ಧೆ ಮತ್ತು ಆದರ ಪೂರ್ವಕವಾಗಿ ಸೇವಾಕಾಲವು ಜರುಗುವುದು.

## ಶ್ರೀ ಅಮ್ಮನವರ ಥಡಾಉತ್ಸವವು.

---

ಈ ಉತ್ಸವವು ಧನುರ್ಮಾಸದ ಐದನೆಯ ತೇದಿಯಲ್ಲಿ ನಡೆಯುವುದು.

ಧನುರ್ಮಾಸದ ಐದನೆಯ ತೇದಿ ರಾತ್ರಿ ನಿತ್ಯಕಟ್ಟಳೆಯಾಗಿ, ಆಳ್ವಾರ್ ಮುಂತಾದವರಿಗೆ ಅರುಳಪ್ಪಾಡು, ಇಯಲ್ ಗೋಷ್ಠಿಗೆ ಅರುಳಪ್ಪಾಡು, ಆದ ನಂತರ, ನೂರು ಧಡಾಉತ್ಸವದ ಪ್ರಯುಕ್ತ ಶ್ರೀ ಉಭಯನಾಚ್ಚಿಯಾರ್ ಅಮ್ಮನವರುಗಳಿಗೆ ಪಂಚಾಮೃತ ಸ್ನಪನ, ಅಲಂಕಾರ ಮುಂತಾದುದು ನಡೆದು, ಶ್ರೀ ಅಮ್ಮನವರು ಒಳಪ್ರಾಕಾರದಲ್ಲಿ ಬಿಜಮಾಡಿಸುವಾಗ, ಪಾಠಶಾಲೆಯ ಬಳಿ ಪುಷ್ಪಧಾರಣೆಯಾಗಿ, ಪಂಚಾಮೃತ ನಿವೇದನ, ಮುಂತಾದುದು ನಡೆದು, ಆರತಿ ಸಮರ್ಪಣೆಯಾಗಿ, ನಂತರ ಅಡಿಗೆಯವರಿಗೆ ಮರ್ಯಾದೆಯು ನಡೆದು ನೂರುಥಡ ತಳಿಗೆಯನ್ನು ಶ್ರೀಅಮ್ಮನವರುಗಳ ಜೊತೆಯಲ್ಲಿ ಬಿಜಮಾಡಿಸಿಕೊಂಡು, ಒಳಪ್ರಾಕಾರದಿಂದ ಒಳಗುಡಿಯಲ್ಲಿ ಆಸ್ಥಾನಕ್ಕೆ ದಯಮಾಡಿಸುವರು. ನಂತರ ಶ್ರೀಯವರಿಗೆ ನೂರುಧಡ ತಳಿಗೆ ಅಂದರೆ ಸಕ್ಕರೆಪೊಂಗಲ್ ನಿವೇದನವಾಗಿ, ಶಾತ್ತುಮುರೈ ಮುಂತಾಗಿ ನಡೆದು, ಅಧಿಕಾರಿಗಳಿಗೆ ಅರುಳಪ್ಪಾಡು ಮುಂತಾಗಿ ಮರ್ಯಾದೆಗಳು ನಡೆಯುವುದು.

# ೪೦. ಕೊಠಾರೋತ್ಸವವು.

ಧನುರ್ಮಾಸದ ಇಪ್ಪತ್ತನೆಯ ತೇದಿಯಿಂದ ಹತ್ತು ದಿವಸಗಳ ಪರ್ಯಂತರ ಈ ಉತ್ಸವವು ನಡೆಯುವುದು.

ಧನುರ್ಮಾಸದ 19 ನೆಯ ದಿವಸ ಕೊಠಾರೋತ್ಸವಕ್ಕೆ ಡೋಲೋತ್ಸವದಂತೆ ಅಂಕುರಾರ್ಪಣ ಮುಂತಾಗಿ ನಡೆಯುವುವು.

ಮಾರನೆಯ ದಿವಸ ಮಧ್ಯಾಹ್ನ ಮೂರುಘಂಟೆಗೆ ಶ್ರೀ ತಿರುನಾರಾಯಣ ಸ್ವಾಮಿಯವರ ಸನ್ನಿಧಿಯಲ್ಲಿ ನಾಲ್ಕು ವೇದಗಳಿಗೂ ತೊಡಕವಾಗಿ, ತಳಿಗೆಯ ನಿವೇದನ, ಗೋಷ್ಠೀ ವಿನಿಯೋಗ ಮುಂತಾಗಿ ನಡೆಯುವುದು. ತರುವಾಯ ಶ್ರೀ ಉತ್ಸವರು, ಶ್ರೀ ಉಭಯನಾಚ್ಚಿಯಾರ್, ನಮ್ಮಾಳ್ವಾರ್, ಭಾಷ್ಯಕಾರರ ಸಮೇತ ಗ್ರಾಮ ಪ್ರದಕ್ಷಿಣೆಯಿಂದ ಬಿಜಮಾಡಿಸುವಾಗ, ಆದಿವಸ ಸೇವಾ ಸೇವಾರ್ಥ ಗಾರರಿಂದ ಸಮರ್ಪಿಸಲ್ಪಟ್ಟ ಪುಷ್ಪವನ್ನು ಧಾರಣೆಮಾಡಿ ಯಥಾಕ್ರಮವಾಗಿ ಕೊಠಾರ ಮಂಟಪಕ್ಕೆ ಬಿಜಮಾಡಿಸಿದ ನಂತರ ಸಮಸ್ತ ಆಳ್ವಾರುಗಳೂ ಅಲ್ಲಿಗೆ ಬಿಜಮಾಡಿ, ಶ್ರೀಯವರಿಗೂ, ಆಳ್ವಾರ್ ಆಚಾರ್ಯರುಗಳಿಗೂ ತಿರುವಾರಾಧನೆ, ದೀಪ, ಧೂಪ ಸಮರ್ಪಣೆ ಮುಂತಾದುದು ನಡೆದು ನಾಲ್ಕು ವೇದಗಳಿಗೂ ಅರುಳಪ್ಪಾಡಾಗಿ, ವೇದ ಪಾರಾಯಣಕ್ಕೆ ಪ್ರಾರಂಭವಾಗುವುದು. ನಂತರ ತಳಿಗೆಯ ನಿವೇದನ, ಆರತಿ, ಗೋಷ್ಠೀ ವಿನಿಯೋಗ ಮುಂತಾದುದು ನಡೆಯುವುದು ತರುವಾಯ ಶ್ರೀಯವರು ಪತ್ತು ಕುಲಾವಿಗೆ ಬಿಜಮಾಡಿ ನಾಲ್ಕು ಮೂಲೆಯಲ್ಲಿಯೂ ತಿರುವಾರಾಧನೆ, ತಳಿಗೆಯ ನಿವೇದನ, ಆರತಿ ಮುಂತಾದುದು ನಡೆದು ವೇದಪಾರಾಯಣಕ್ಕೆ ಅರುಳಪ್ಪಾಡಾಗಿ, ವೇದ ಪಾರಾಯಣದಿಂದ ಕೊಠಾರಮಂಟಪದ ಒಂದು ಸುತ್ತು ಪ್ರದಕ್ಷಿಣೆಯಾಗುವುದು. ನಂತರ ಎರಡನೆಯ ಸುತ್ತಿಗೆ ಮೊದಲನೆಯ ವೀಧಿಯಲ್ಲಿ ವಿಷ್ವಕ್ಸೇನರ್, ನಮ್ಮಾಳ್ವಾರ್, ತಿರುಮಂಗೈಯಾಳ್ವಾರ್, ಇವರುಗಳಿಗೆ ಅರುಳಪ್ಪಾಡು, ತಿರುಪರಿವಟ್ಟ, ತಿರುಮಾಲೆ,

ಶ್ರೀ ಶಠಾರಿಯು ಮರ್ಯಾದೆಯಾಗಿ, ಶ್ರೀಯವರು ಎರಡನೆಯ ವೀಧಿಗೆ ದಯಮಾಡುವಲ್ಲಿ ಪೊಯ್ಹೈಯಾರ್, ಪೂಧತ್ತಾರ್, ಪೇಯಾಳ್ವಾರ್, ತಿರುಮಳಿ ಶೈಪ್ಪಿರ್ರ್, ಪಟ್ಟರ್‌ಭಿರಾ ಮುಂತಾದವರುಗಳಿಗೆ ಮೇಲ್ಕಂಡಂತೆ ತಿರುಪರಿವಟ್ಟ ಮುಂತಾಗಿ ಮರ್ಯಾದೆಯು ನಡೆದು, ಮೂರನೆಯ ವೀಧಿಗೆ ಶ್ರೀಯವರು ದಯಮಾಡುವಲ್ಲಿ ಕುಲಶೇಖರಾಳ್ವಾರ್, ತೊಂಡರಪ್ಪೊಡಿಯಾಳ್ವಾರ್, ತಿರುಪ್ಪಾಣಿ, ಮಧುರಕವಿ, ನಾಥಮುನಿ, ತಿರುಕ್ಕಚ್ಚಿನಂಬಿ, ಮುಂತಾದ ಆಳ್ವಾರ್ ಆಚಾರ್ಯರುಗಳಿಗೆ ಮೇಲಿನಂತೆ ತಿರುಪರಿವಟ್ಟ ಮುಂತಾಗಿ ಮರ್ಯಾದೆಯಾಗಿ, ನಾಲ್ಕನೆಯ ವೀಧಿಗೆ ಶ್ರೀಯವರು ಬಿಜಮಾಡಿಸುವಲ್ಲಿ ಶ್ರೀ ರಾಮಾನುಜಾಚಾರ್ಯರು. ಕೂರತ್ತಾಳ್ವಾರ್ ಇವರುಗಳಿಗೆ ಯಥಾಕ್ರಮದಿಂದ ಮರ್ಯಾದೆಯು ನಡೆದು, ಇಯಲ್ ಗೋಷ್ಠಿಗೆ ಶ್ರೀ ಶಠಾರಿಯಾಗಿ, ಇಯಲ್‌ಗೋಷ್ಠಿಗೆ ಅರುಳಪ್ಪಾಡಾಗಿ, ಸೇವಾಕಾಲವು ನಡೆಯುವುದು.

ಮೂರನೆಯ ಪ್ರದಕ್ಷಿಣೆಗೆ "ವಿಣ್ಣಪ್ಪಂ ಶೈವಾರ್" ಎಂಬ ತಮಿಳು ಸ್ತೋತ್ರವನ್ನು ಹೇಳಿಕೊಂಡು, ಶ್ರೀಯವರ ಮುಂದುಗಡೆಯಲ್ಲಿ ಆಚಾರ್ಯ ಪುರುಷರು ಬರುವರು ನಾಲ್ಕನೆಯ ಪ್ರದಕ್ಷಿಣೆಯಲ್ಲಿ ಸಂಗೀತ, ರಾಮಾಯಣದ ಶ್ಲೋಕಗಳು, ಪಠನೆ ಯಾಗುವುದು. ಐದನೆಯ ಪ್ರದಕ್ಷಿಣೆಯಲ್ಲಿ ವೀಣೆಯೂ, ಆರನೆಯ ಪ್ರದಕ್ಷಿಣೆಯಲ್ಲಿ ಸಂಗೀತವೂ, ಏಳನೆಯ ಪ್ರದಕ್ಷಿಣೆಯಲ್ಲಿ ಮೇಳ ತಾಳಗಳೂ, ಜರುಗುವುವು.

ಈರೀತಿಯಾಗಿ ಏಳು ಪ್ರದಕ್ಷಿಣೆ ಯಾದನಂತರ ಶ್ರೀಯವರು ಕೊಠಾರದ ಆಸ್ಥಾನಕ್ಕೆ ಪುನಃ ಬಿಜಮಾಡಿ, ಅಲ್ಲಿ ತಳಿಗೆಯ ನಿವೇದನ, ಆರತಿ, ಅರುಳಪ್ಪಾಡು, ಮುಂತಾಗಿ ನಡೆದು, ಶ್ರೀಯವರು ದೇವಸ್ಥಾನಕ್ಕೆ ಹಿಂತಿರುಗುವಾಗ, ಪಡಿಏತ್ತದಿಂದ ಮಧ್ಯಮಂಟಪಕ್ಕೆ ಬಿಜಮಾಡಿ, ನಂತರ ರಾತ್ರಿಯ ನಿತ್ಯಕಟ್ಟಲೆ, ಆರಾಧನೆ ಮುಂತಾಗಿ ನಡೆಯುವುದು. ಶ್ರೀ ಚಲುವರಾಯ ಸ್ವಾಮಿಯವರ ಸನ್ನಿಧಿಯಲ್ಲಿಯೂ ಸಹ ನೇಮಿ ಸೇವಾರ್ಥಗಾರರ ತಳಿಗೆ, ಕೈಗಾಣಿಕೆತಟ್ಟೆ ಮುಂತಾದುದು ನಿವೇದನವಾಗಿ, ತಿರುವಾಯಿಮುಳಿಯ ತೊಡಕವು ನಡೆಯುವುದು. ಆಮೇಲೆ ಶ್ರೀ ಯದುಗಿರಿ

ಯಮ್ಮನವರ ಸನ್ನಿಧಿಯಲ್ಲಿಯೂ, ಸೇವೆಯು ನಡೆದ ತರುವಾಯ, ಯಾಗಶಾಲೆಯಲ್ಲಿ ಹೋಮ, ಬಲಿಪ್ರದಾನ, ಗೋಷ್ಠೀ ವಿನಿಯೋಗ ಮುಂತಾದುದ ನಡೆಯುವುವು.

ಇದೇ ಕ್ರಮದಲ್ಲಿ ಎರಡನೆಯ ದಿವಸದಿಂದ ಒಂಭತ್ತನೆಯ ದಿವಸದ ವರೆಗೂ ಆಯಾಯ ನೇಮ ಸೇವಾರ್ಥಗಾರರಿಂದ ಮೇಲ್ಕಂಡಂತೆ ಉತ್ಸವಾದಿಗಳು, ಭಕ್ತಿ ಪೂರ್ವಕವಾಗಿ, ಬಹಳ ವಿಜೃಂಭಣೆಯಿಂದ ನಡೆಯುವುವು.

ಹತ್ತನೆಯ ದಿವಸ ಶ್ರೀ ಬ್ರಹ್ಮತಂತ್ರ ಪರಕಾಲ ಸ್ವಾಮಿಗಳವರ ಶ್ರೀ ಮಠದ ನೇಮಿ ಸೇವಾರ್ಥವು ಜರುಗುವುದು ಈ ದಿನ ಕೊಠಾರೋತ್ಸವವಾದನಂತರ ಶ್ರೀಯವರು ದೇವಸ್ಥಾನಕ್ಕೆ ಬಿಜಮಾಡಿ, ತರುವಾಯ ಮಧ್ಯ ಮಂಟಪದಲ್ಲಿಯ ಆಸ್ಥಾನ ಮಂಟಪದಲ್ಲಿ ಶ್ರೀಯವರನ್ನು ಬಿಜಮಾಡಿಸಿ, ಅಲಂಕಾರ ಸಮರ್ಪಣೆಯಾದ ಬಳಿಕ, ಸುತ್ತಲೂ ಆಳ್ವಾರ್ ಆಚಾರ್ಯರುಗಳನ್ನು ಬಿಜಮಾಡಿಸಿ, ಅವರುಗಳಿಗೂ ಅಲಂಕಾರ ಸಮರ್ಪಣೆಯಾದ ತರುವಾಯ, ರಾತ್ರಿಯ ನಿತ್ಯಕಟ್ಟಲೆಯು ಜರುಗಿ, ಪೂರ್ಣಾಹುತಿ, ರಕ್ಷಾಬಂಧನ ವಿಸರ್ಜನೆ, ನಾಲ್ಕು ವೇದಗಳಿಗೆ ಶಾತ್ತುಮುರೈ ಗೋಷ್ಠಿಗೆ ಶಠಾರಿ, ತೀರ್ಥ, ವಿನಿಯೋಗ ಮುಂತಾದವುಗಳು ನಡೆಯುವುವು. ಆಮೇಲೆ ಶ್ರೀ ಚಲುವರಾಯ ಸ್ವಾಮಿಯವರಿಗೂ, ಆಳ್ವಾರ್ ಆಚಾರ್ಯರುಗಳಿಗೂಅಲಂಕಾರ ತಿರುವಾರಾಧನೆ, ಕೈಗಾಣಿಕೆಗೂ; ಫಲಗಳ ನಿವೇದನ, ದೀಪ, ಧೂಪ ಸಮರ್ಪಣೆ, ಅಷ್ಟೋತ್ತರ ಮುಂತಾಗಿ ನಡೆದು, ಸರಕಾರಿ ಮತ್ತು ಶ್ರೀ ಮಠದ ತಳಿಗೆಯ ನಿವೇದನ, ಪ್ರಬಂಧ ಸೇವಾಕಾಲ ನಡೆದು, ಶ್ರೀ ಭಾಷ್ಯಕಾರರ ಸನ್ನಿಧಿಯಿಂದ ತಿರುವಾಯಿಮುಳಿ ಶಾತ್ತುಮುರೈಗೆ ತಳಿಗೆಯನ್ನು ಸಮಸ್ತ ವಾದ್ಯ ಬಿರುದಾವಳಿ ಗಳೊಂದಿಗೆ ಒಳಪ್ರಾಕಾರ ಮಾರ್ಗವಾಗಿ, ಶ್ರೀಯವರ ಆಸ್ಥಾನಕ್ಕೆ ಬಿಜಮಾಡಿಸಿಕೊಂಡು ಬಂದು, ಅಲ್ಲಿ ಶ್ರೀಯವರಿಗೆ ಆರತಿ ಸಮರ್ಪಣೆಯಾದ ತರುವಾಯ ಶ್ರೀ ನಮ್ಮಾಳ್ವಾರನ್ನು ನವರಂಗ ಪ್ರದಕ್ಷಿಣೆಯಾಗಿ, ಪ್ರಬಂಧ ಪಾರಾಯಣದೊಂದಿಗೆ, ಶ್ರೀಶನ ತಿರುವಡಿಯಲ್ಲಿ ಬಿಜಮಾಡಿಸಿ, ತಿರುವಾಯಿಮೊಳಿ, ಶಾತ್ತುಮುರೈ, ಅರೆಯರ ಮಂಗಳಾಶಾಸನ, ಶ್ರೀಯವರಿಗ ಕರ್ಪೂರಾರತಿ

ಮುಂತಾಗಿ ನಡೆಯುವುದು. ನಂತರ ನಮ್ಮಾಳ್ವಾರರಿಗೆ ತಿರುಪರಿವಟ್ಟ, ಮಾಲೆ, ಶ್ರೀ ಶಠಾರಿ, ಮುಂತಾದ ಮರ್ಯಾದೆಯಾಗಿ, ಇವರನ್ನು ಆಸ್ಥಾನಕ್ಕೆ ಬಿಜಮಾಡಿಸಿ, ಗೋಷ್ಠಿಗೆ ಶ್ರೀ ಶಠಾರಿ ತೀರ್ಥ, ವಿನಿಯೋಗ ಮುಂತಾದುದು ನಡೆಯುವುದು.

ಈ ಕೊಠಾರೋತ್ಸವದ ಹತ್ತುದಿವಸವೂ ಶ್ರೀ ನಮ್ಮಾಳ್ವಾರ್ ಉತ್ಸವರು, ತಮ್ಮ ಮೂಲವರ ಸನ್ನಿಧಿಗೆ ಬಿಜಮಾಡಿ, ಅಲ್ಲಿ ಪ್ರಬಂಧ ಸೇವಾಕಾಲ, ಶಾತ್ತುಮುರೈ, ನಡೆಯುವುದು. ಇದೇರೀತಿಯಾಗಿ ಮಧ್ಯಾಹ್ನಕಾಲದಲ್ಲಿ ಶ್ರೀ ಯದುಗಿರಿಯಮ್ಮನವರ ಸನ್ನಿಧಿಗೂ ಬಿಜಮಾಡಿಸುತ್ತಾರೆ.

## ೪೧. ಅಧ್ಯಯನೋತ್ಸವವು.

---

ಇದು ಕೊಠಾರೋತ್ಸವದಲ್ಲಿಯೇ ನಡೆಯುವುದು ಉಳಿದ ಸಂಗತಿಗಳು, ಕೊಠಾರೋತ್ಸವದಲ್ಲಿ ವಿವರಿಸಿದೆ

## ೪೨. ಮಕರ ಸಂಕ್ರಾಂತಿಯ ಉತ್ಸವವು.

---

ಇದು ಮಕರಮಾಸದ ಒಂದನೆಯ ತೇದಿಯಲ್ಲಿ ಬರುವುದು

ಈ ದಿವಸ ಶ್ರೀ ತಿರುನಾರಾಯಣ ಸ್ವಾಮಿಯವರ ಸನ್ನಿಧಿಯಲ್ಲಿ ಅಷ್ಟೋತ್ತರವಾದಮೇಲೆ, ವಿಧ್ಯುಕ್ತವಾಗಿ ಅಭಿಷೇಕವು ನಡೆದು, ಸಾಯಂಕಾಲ ಶ್ರೀ ಉತ್ಸವರು ಶ್ರೀ ವೇದಾಂತ ದೇಶಿಕರವರ ಸನ್ನಿಧಿಗೆ ಬಿಜಮಾಡಿ, ಅಲ್ಲಿ ತಿರುವಂದಾದಿ ಮುಂತಾದ ಸೇವೆಯು ನಡೆದ ನಂತರ, ಜೋಯಿಸರು ಸಂಕ್ರಾಂತಿಯ ಫಲವನ್ನು ಹೇಳುವರು. ತರುವಾಯ ಶ್ರೀಯವರು ಆಸ್ಥಾನಕ್ಕೆ ದಯಮಾಡುವರು.

## ೪೩. ಕನೂಹಬ್ಬವು.

---

ಇದು ಮಕರಮಾಸ ಎರಡನೆಯ ತೇದಿಯಲ್ಲಿ ನಡೆಯುವುದು.

ಈ ದಿವಸ ಬೆಳಿಗ್ಯೆ ನಿತ್ಯಕಟ್ಟಲೆಯಾದ ನಂತರ ಶ್ರೀ ಉಭಯ ನಾಚ್ಯಾರ್ರವರಿಗೆ ಅಭಿಷೇಕವು ನಡೆದು ಕಲ್ಯಾಣಿಗೆ ಬಿಜಮಾಡಿ, ಅಲ್ಲಿ ಆರತಿ, ತಿರುವಾರಾಧನೆ, ತೀರ್ಥ ಮುಂತಾದುದ ಕ್ರಮವರಿತು ನಡೆಯುವುದು.

ಸಾಯಂಕಾಲ ಏಳು ಘಂಟೆಗೆ ಶ್ರೀ ಉಭಯನಾಚ್ಯಾರಮ್ಮನವರು ಅಂಗಮಣಿ ಮಂಟಪಕ್ಕೆ ದಯಮಾಡಿ, ಅಲ್ಲಿ ಶ್ರೀಯವರಿಗೆ ಮಡಲು ತುಂಬಿ ನಂತರ ಮಂಟಪಕ್ಕೆ ಬಿಜಮಾಡುವರು. ಅಲ್ಲಿ ತಿರುವಾರಾಧನೆ, ಆರತಿ, ನಿವೇದನ ಮುಂತಾದುದು ನಡೆದು, ನಡೆಮುಡಿಯೊಡನೆ ಗ್ರಾಮಪ್ರದಕ್ಷಿಣೆಯಿಂದ ಆಸ್ಥಾನಕ್ಕೆ ದಯಮಾಡುವಲ್ಲಿ, ಶ್ರೀಯವರು ಕೋಪಗೊಂಡು ಕುದುರೆಯ ವಾಹನದಿಂದ ಹೊರಟು ಪಾರ್ವಟಿವರೆವಿಗೂ ಹೋಗುವಲ್ಲಿ, ಮಧ್ಯದಲ್ಲಿ ಅಂದರೆ ಪೋಲೀಸ್‌ಸ್ಟೇಷ‍ನ್ ಬಳಿ ಇರುವ ಮಂಟಪದಬಳಿ ಆಸ್ಥಾನ ಸೇವೆಯಾಗುವುದು. ಆಗ ಒಂದು ಮೊಲವನ್ನು ತಂದು ಅರ್ಚಕರ ಮುಖಾಂತರವಾಗಿ ಅದಕ್ಕೆ ಮಾಲೆಯನ್ನು ಹಾಕಿಸಿ, ಶ್ರೀಯವರ ಪಾದದಲ್ಲಿಟ್ಟು ಬಿಟ್ಟುಬಿಡುವರು ಶ್ರೀಯವರು ಸಂತಸಗೊಂಡು ದೇವಸ್ಥಾನಕ್ಕೆ ಹಿಂತಿರುಗುವರು.

## ೪೪. ಅಳ್ಳಂ ತಳ್ಳಂ ಚಪ್ಪರ.

---

ಇದು ಮಕರಮಾಸದ ಮೂರನೆಯ ತೇದಿಯಲ್ಲಿ ಜರುಗುವುದು.

ಶ್ರೀ ಭಾಷ್ಯಕಾರರು ಹಿಂದೆ ತೊಂಡನೂರುನಿಂದ ತಿರುನಾರಾಯಣಪುರಕ್ಕೆ ಬಂದು, ಅಲ್ಲಿ ಶ್ರೀಶನ ಕೈಂಕರ್ಯವನ್ನು ಮಾಡುತಲಿದ್ದುದು ವಿದಿತ ವಿಷಯವಾಗಿದೆ.

ಆ ಕಾಲದಲ್ಲಿ ಒಂದು ದಿವಸ ತೊಂಡನೂರು ನಂಬಿಯುವರು ಬ್ರಾಹ್ಮಣರ ಸಂತರ್ಪಣೆಯಂ ಮಾಡಲು, ಶ್ರೀಯವರಿಗೆ ನಿವೇದನವಾದ ಪ್ರಸಾದವನ್ನು ದಯಪಾಲಿಸಲು, ಶ್ರೀ ರಾಮಾನುಜಾಚಾರ್ಯರನ್ನು ಯಾಚಿಸಿದಂತೆಯೂ, ಅವರ ಅಪ್ಪಣೆಯಂತೆ ಭಗವನ್ನಿವೇದಿತವಾದ ಪ್ರಸಾದವನ್ನು ತೆಗೆದುಕೊಳ್ಳಲು ಹೋದಾಗ, ಕೈಂಕರ್ಯಪರರು ಅವರನ್ನು ತಡೆದು ತಳ್ಳಿದರೆಂತಲೂ, ತರುವಾಯ ನಂಬಿಗಳು ಯತೀಂದ್ರರಲ್ಲಿ ಶ್ರುತಪಡಿಸಿಕೊಳಲು, ತಮಗೆ ಬೇಕಾದಷ್ಟು ತೆಗೆದುಕೊಂಡು ಹೋಗಲು ಅಪ್ಪಣೆ ಮಾಡಿದರೆಂತಲೂ, ಅವರಂತೆ ನಂಬಿಯುವರು ಪ್ರಸಾದವನ್ನು ತೆಗೆದುಕೊಂಡು ಹೋಗಿ, ಭಾಗವತೋತ್ತಮರಿಗೆ ಸಂತರ್ಪಣೆಯನ್ನು ಮಾಡಿದರೆಂದೂ ಪ್ರತೀತಿಯುಂಟು. ಇದರ ಜ್ಞಾಪಕಾರ್ಥವಾಗಿ, ಈ ದಿವಸ ಸಾಯಂಕಾಲ ನಿತ್ಯಕಟ್ಟಳೆ ಯಾದನಂತರ ಸಾಮ್ಯದವರ ಮತ್ತು ಸಜ್ಜೆಹಟ್ಟಿಯವರ ಬಾಬತು ತಳಿಗೆಯನ್ನೆಲ್ಲಾ ದೇವಸ್ಥಾನದಲ್ಲಿ ಮಾಡಿಸಿ, ಶ್ರೀ ಚಲುವರಾಯಸ್ವಾಮಿಯವರ ಮುಂಭಾಗದಲ್ಲಿ, ತಿರುಪ್ಪಾವಾಡೆ ಹಾಡಿಸಿ, ತಳಿಗೆಯ ನಿವೇದನವಾದ ಮುಂತಾಗಿ ನಡೆದ ನಂತರ ತೊಂಡನೂರು ನಂಬಿಯವರು ಮೇಲ್ಕಂಡಂತೆ ಪ್ರಸಾದವನ್ನು ಯಾಚಿಸಿ ಕೈನೀಡಿದಾಗ, ಕೈಂಕರ್ಯಪರರು ಅಡ್ಡಮಾಡಿ ತಳ್ಳುವಂತೆಯೂ, ಈ ರೀತಿ ಮೂರಾವರ್ತಿ ನಡೆದ ನಂತರ, ಶ್ರೀ ಭಾಷ್ಯಕಾರರ ಅಪ್ಪಣೆಯನ್ನು ಪಡೆದಂತೆ ಭಾವನೆಯಿಂದ ಸೇವಾರ್ಥದಾರರ ಪ್ರಸಾದವನ್ನು ತೆಗೆದುಕೊಂಡು ಹೋಗಿ, ಸಂತರ್ಪಣೆಯನ್ನು ಮಾಡುವರು ಈ ಸನ್ನಿವೇಶದಲ್ಲಿ ನಮ್ಮಾಳ್ವಾರ್, ತಿರುಮಂಗೈಯಾಳ್ವಾರ್, ಮತ್ತು ಶ್ರೀ ರಾಮಾನುಜಾಚಾರ್ಯರಿಗೆ ಅರುಳಪ್ಪಾಡು, ಪರಿವಟ್ಟ, ಮಾಲೆ, ಶ್ರೀಶಠಾರಿಗಳಾಗಿ ಆಮೇಲೆ ಇಯಲ್ ಗೋಷ್ಠಿಗೂ ಅರುಳಪ್ಪಾಡು, ನೂತ್ತಂದಾದಿ ಪಠನೆಯಿಂದ ಶಾತ್ತುಮುರೈಯಾದ ನಂತರ, ಸರ್ವತ್ರ ತೀರ್ಥ ಪ್ರಸಾದ ವಿನಿಯೋಗವಾಗುವುವು.

## ೪೫. ಗರುಡ ಜಯಂತಿಯು.



ಇದು ತೈ ಅಮಾವಾಸ್ಯೆಯ ಅಥವ ಪುಷ್ಯ ಬಹುಳ ಅಮಾವಾಸ್ಯೆಯ ದಿವಸ ಬರುವುದು.

ಈದಿವಸ ಹಗಲು ಸಹಸ್ರನಾಮವಾದ ನಂತರ ಶ್ರೀ ಸಂಪತ್ಕುಮಾರರಿಗೂ ಮತ್ತು ವೈನತೇಯರಿಗೂ ಅಭಿಷೇಕವಾಗುವುದು. ಮಧ್ಯಾಹ್ನ ಶ್ರೀಯವರನ್ನು ಗರುಡವಾಹನದಿಂದ ಗ್ರಾಮ ಪ್ರದಕ್ಷಿಣೆಯಾಗಿ, ಆಸ್ಥಾನ ಮಂಟಪಕ್ಕೆ ಬಿಜಮಾಡಿಸುವರು.

ರಾತ್ರಿ ಶ್ರೀ ಶಿಲ್ಪ ಪ್ಪಿಳ್ಳೈಯವರ ಸನ್ನಿಧಿಯಲ್ಲಿ ಅಷ್ಟೋತ್ತರ ವಾಗುವುದಕ್ಕೆ ಪೂರ್ವಭಾವಿ, ಗರುತ್ಮಂತನಿಗೂ ತಿರುವಾರಾಧನೆಯಾಗಿ, ಅಮೃತ ಕಲಶ (ಕೊಳಕಟ್ಟೆ) ನಿವೇದನವಾಗಿ, ಗೋಷ್ಠಿಗೆ ತೀರ್ಥ, ವಿನಿಯೋಗ ಮುಂತಾಗಿ ನಡೆಯುವುದು

## ೪೬. ರಥಸಪ್ತಮಿಯು.



ಇದು ಮಾಘ ಶುದ್ಧ ಸಪ್ತಮಿಯ ದಿವಸ ಜರುಗುವುದು.

ಈದಿವಸ ಬೆಳಗಿನ ಝಾವ 5½ ಘಂಯೊಳಗೆ ಶ್ರೀಯವರಿಗೆ ನಿತ್ಯ ಕಟ್ಟಲೆಯು ನಡೆದು, ಉತ್ಸವರನ್ನು ಸೂರ್ಯಮಂಡಲ ವಾಹನಕ್ಕೆ ಬಿಜಮಾಡಿಸಿ, ಏಳುಘಂಟೆಗೆ ಗ್ರಾಮ ಪ್ರದಕ್ಷಿಣೆಯಿಂದ ಆಸ್ಥಾನಕ್ಕೆ ಹಿಂತಿರುಗುವರು. ನಂತರ ತಿರುವಾರಾಧನೆ, ಅಷ್ಟೋತ್ತರ, ತಳಿಗೆ ನಿವೇದನ, ಆರತಿ, ತೀರ್ಥವಿನಿಯೋಗ ಮುಂತಾದುದು ನಡೆಯುವುದು. ಪರ್ವಕಾಲವಾದ ಈ ದಿವಸಅನೇಕ ಭಕ್ತಾದಿಗಳು ಸೂರ್ಯಮಂಡಲ ಮಧ್ಯದಲ್ಲಿ ದೇದೀಪ್ಯಮಾನನಾಗಿ ದರ್ಶನವನ್ನು ಕೊಡುವ ಶ್ರೀ ಮನ್ನಾರಾಯಣನನ್ನು ಸೇವಿಸಲು, ಬರುತ್ತಾರೆ. ಈ ಕ್ಷೇತ್ರದಲ್ಲಿ ವಾಸವಾಗಿರುವ ಜನಗಳೆಲ್ಲರೂ, ಈದಿವಸ ಕಲ್ಯಾಣಿಯಲ್ಲಿ ಮಿಂದು, ಶ್ರೀಶನ ಸೇವೆಯನ್ನು ಬಹಳ ಭಕ್ತಿಯಿಂದ ಮಾಡುವರು.

## ೪೭. ಶ್ರೀಮಧ್ವನವಮಿಯು.



ಇದು ಮಾಘಶುದ್ಧ ನವಮಿಯ ತಿವಸ ನಡೆಯುವುದು ಈದಿವಸ ನಿತ್ಯಕಟ್ಟಲೆ ಯಾದನಂತರ ಮೂರನೆಯ ಝಾಮದಲ್ಲಿ ಶ್ರೀ ಉತ್ಸವರು

ಹನುಮಂತ ವಾಹನಾರೂಢನಾಗಿ, ಗ್ರಾಮ ಪ್ರದಕ್ಷಿಣೆಯಿಂದ, ಆಸ್ಥಾನಕ್ಕೆ ಹಿಂತಿರುಗುವರು. ನಂತರ ತಿರುವಾರಾಧನೆ, ಆರತಿ, ತಳಿಗೆ ನಿವೇದನ, ತೀರ್ಥ ವಿನಿಯೋಗ ಮುಂತಾದುದು ಕ್ರಮವರಿತು ನಡೆಯುವುದು.

## ೪೮. ಶ್ರೀ ರಾಮಾನುಜಾಚಾರ್ಯರು ತೊಂಡನೂರಿನಿಂದ ಶ್ರೀ ತಿರುನಾರಾಯಣ ಪುರಕ್ಕೆ ದಯಮಾಡಿಸಿದ ದಿವಸದ ಜ್ಞಾಪಕಾರ್ಥದ ಉತ್ಸವವು.



ಇದು ಮಕರಮಾಸ ಪುನರ್ವಸು ನಕ್ಷತ್ರದಲ್ಲಿ (ಮಾಘಮಾಸದ ಪುನರ್ವಸು ನಕ್ಷತ್ರ) ನಡೆಯುವುದು.

ಈದಿವಸ ಬೆಳಗಿನ ಝಾಮ ನಾಲ್ಕು ಘಂಟೆಗೆ ಶ್ರೀ ರಾಮಾನುಜಾಚಾರ್ಯರಿಗೆ ಅಭಿಷೇಕವಾಗಿ, ಅಲ್ಲಿಂದ ಕಲ್ಯಾಣಿಗೆ ಬಿಜಮಾಡಿ, ಅಲಂಕಾರ, ತಿರುವಾರಾಧನೆ, ನಿತ್ಯಾನುಸಂಧಾನ, ಗದ್ಯತ್ರಯ ಪಾರಾಯಣ, ತಳಿಗೆಯ ನಿವೇದನ, ಶಾತ್ತುಮುರೈಯಾಗಿ, ಪುಷ್ಪಸಮರ್ಪಣೆಯಂ ಸ್ವೀಕರಿಸಿ ಅಲ್ಲಿಂದ ದೇವಸ್ಥಾನಕ್ಕೆ ಹಿಂತಿರುಗುವರು. ಅಷ್ಟರಲ್ಲಿ ಶ್ರೀ ತಿರುನಾರಾಯಣ ಸ್ವಾಮಿಯವರಿಗೆ ವಿಶ್ವರೂಪ ಸೇವೆಯ ಪ್ರಯುಕ್ತ ಆರತಿಯಾಗಿ, ಆಗ "ಪಹಲ್‌ಕಂಡೇ ನಾರಾಯಣನ್ಯೈಕಂಡೇನ್" ಎಂಬ ಪಾಶುರವನ್ನು ಹೇಳಿದ ನಂತರ ಶ್ರೀಶಠಾರಿ, ಮಾಲೆ, ಪರಿವಟ್ಟ, ಮುಂತಾದ ಮರ್ಯಾದೆಗಳು ಶ್ರೀಮದಾಚಾರ್ಯರಿಗೆ ನಡೆದ ತರುವಾಯ, ಗೋಷ್ಠಿಗೆ ಶ್ರೀಶಠಾರಿಯಾಗಿ, ಶ್ರೀ ಭಾಷ್ಯಕಾರರನ್ನು ಶ್ರೀಶನ ಸನ್ನಿಧಿಯ ಸುಖನಾಶಿಯಲ್ಲಿ ಬಿಜಮಾಡಿಸಿ, ನಂತರ ಶ್ರೀ ತಿರುನಾರಾಯಣ ಸ್ವಾಮಿಗೆ ತಿರುವಾರಾಧನೆ, ಫಲ ಪುಷ್ಪ ಸಮರ್ಪಣೆ, ಆರತಿ, ಸಹಸ್ರನಾಮ, ನಿವೇದನ, ಶಾತ್ತುಮುರೈ ಸಹ ನಡೆಯುವುದು. ರಾತ್ರಿ ನಿತ್ಯಕಟ್ಟಳೆಯಾದ ಮೇಲೆ ಗದ್ಯತ್ರಯ ಪಾರಾಯಣ, ತಳಿಗೆಯ ನಿವೇದನ, ಶಾತ್ತುಮುರೈ ನಡೆಯುವುದು. ಆಮೇಲೆ ಶ್ರೀಯತೀಂದ್ರರನ್ನು ಅವರ ಆಸ್ಥಾನಕ್ಕೆ ಬಿಜಮಾಡಿಸಿ, ಅಲ್ಲಿ ತಳಿಗೆಯ ನಿವೇದನವಾದನಂತರ, ತೀರ್ಥವಿನಿಯೋಗ ಮುಂತಾಗಿ ಕ್ರಮವರಿತು ನಡೆಯುವುದು.

## ೪೯. ಡೆಲ್ಲಿಯ ಉತ್ಸವವು.



ಇದು ಕುಂಭಮಾಸ ಜ್ಯೇಷ್ಠಾನಕ್ಷತ್ರದಲ್ಲಿ ಜರುಗುವುದು.

ಈದಿವಸ ನಿತ್ಯಕಟ್ಟಲೆಯಾದ ತರುವಾಯ ಶ್ರೀಯವರಿಗೂ ಮತ್ತು ಶ್ರೀ ರಾಮಾನುಜಾಚಾರ್ಯರಿಗೂ ಸಹ, ಅಭಿಷೇಕವಾಗಿ, ನಂತರ ಶ್ರೀಯವರು ಪಲ್ಲಕ್ಕಿಯಲ್ಲಿ ಬಿಜಮಾಡಿ, ಅಲ್ಲಿಂದ ಶ್ರೀ ವೇದಾಂತದೇಶಿಕರವರ ಸನ್ನಿಧಿಗೆ ದಯಮಾಡಿಸುವರು. ತರುವಾಯ ಶ್ರೀ ಉಭಯನಾಚ್ಯಾರಮ್ಮನವರೂ ಮತ್ತು ಶ್ರೀ ಭಾಷ್ಯಕಾರರ ಸಹಿತ ಸನ್ನಿಧಿಗೆ ದಯಮಾಡಿದ ನಂತರ ಅಲ್ಲಿ ತಿರುವಾರಾಧನೆ, ಆರತಿ, ತೀರ್ಥವಿನಿಯೋಗ ಮುಂತಾಗಿ ಕ್ರಮವರಿತು ನಡೆಯುವುದು. ಆಮೇಲೆ ಶ್ರೀ ಉಭಯನಾಚ್ಯಾರವರು ದೇವಸ್ಥಾನಕ್ಕೆ ಹಿಂತಿರುಗಿದಮೇಲೆ ಶ್ರೀ ಸಂಪತ್ಕುಮಾರರು ಮತ್ತು ಶ್ರೀಮದಾಚಾರ್ಯರವರೂ ಸಹ ಗ್ರಾಮಪ್ರದಕ್ಷಿಣೆಯಿಂದ, ಆಸ್ಥಾನಕ್ಕೆ ಹಿಂತಿರುಗುವರು. ಈದಿವಸ ನಡೆಯುವ ಸೇವೆಯು ಶ್ರೀ ಪರಕಾಲ ಮಠದ ನೇಮಿ ಸೇವೆಯಾಗಿರುವುದು.

## ೫೦. ಸುಬ್ರಾಯನಷಷ್ಠಿ ಉತ್ಸವವು.



ಇದು ಮಾರ್ಗಶಿರ ಶುದ್ಧ ಷಷ್ಠಿಯಲ್ಲಿ ನಡೆಯುವುದು.

ಈದಿವಸ ಕಲ್ಯಾಣಿಯ ತೀರದಲ್ಲಿರುವ ಆದಿಶೇಷನಿಗೆ ಕ್ರಮವರಿತು ಅಭಿಷೇಕ, ನಿವೇದನ, ಮತ್ತು ಪೂಜೆಗಳು ನಡೆಯುತ್ತವೆ.

## ೫೧. ಗ್ರಾಮದೇವತೆಯ ಹಬ್ಬವು.



ಇದು ಶ್ರೀ ವೈರಮುಡಿಯ ಉತ್ಸವಕ್ಕೆ ಪೂರ್ವಭಾವಿಯಾಗಿ ಬಂದು ಮಂಗಳವಾರ ನಡೆಯುವುದು. ಈ ಸೇವೆಗಾಗಿ ನಗದು. ಮೊಬಲಗನ್ನು ದೇವಸ್ಥಾನದ ಬಂಡಿಕಾರರಿಗೆ ಪಾವತಿಮಾಡುವರು. ಉತ್ಸವದ ದಿವಸ ದೇವಸ್ಥಾನದಿಂದ ಮರ್ಯಾದೆಯು ಕಳುಹಿಸಲ್ಪಡುವುದು ಗ್ರಾಮಸ್ಥರು ಈ ಸೇವೆಯನ್ನು ನಡೆಸುವರು.

## ೫೨. ಶ್ರೀ ವರಾಹ ಜಯಂತಿಯು.

ಇದು ಮೀಷಮಾಸದಲ್ಲಿಯು ರೇವತೀನಕ್ಷತ್ರದಲ್ಲಿ ಬರುವುದು. ಈ ದಿವಸ ಶ್ರೀ ವರಾಹ ಕ್ಷೇತ್ರದಲ್ಲಿ ನೆಲಸಿರುವ ಶ್ರೀ ವರಾಹ ಸ್ವಾಮಿಯವರಿಗೆ, ಅಭಿಷೇಕ, ಮಾತ್ತು ಹನ್ನೆರಡು ತಿರುವಾರಾಧನೆಯು ನಡೆದ ನಂತರ, ಅಲಂಕಾರ ತಿರುವಾರಾಧನೆ, ಶ್ರೀ ಮಠವೊದಲು ಆಚಾರ್ಯಪುರುಷರಿಗೆ ಮರ್ಯಾದೆ ಮುಂತಾಗಿ ನಡೆದ ತರುವಾಯ, ಶ್ರೀಯವರಿಗೆ ನಿವೇದನ, ಆರತಿ, ತಿರುಪ್ಪಾಲ್ಲೈ ಶಾತ್ತುಮುರೈ ಮೊದಲಾಗಿ ನಡೆಯುವುದು. ನಂತರ ಶ್ರೀ ಚಲುವರಾಯ ಸ್ವಾಮಿಯವರು ಇಲ್ಲಿಗೆ ಬಿಜಮಾಡಿ ತಿರುವಾರಾಧನೆ, ಆರತಿ, ನಿವೇದನ, ತಿರುವಾಯ್ಮೊಳಿ ಶಾತ್ತುಮುರೈ ಮುಂತಾಗಿ ನಡೆದ ತರುವಾಯ ತೀರ್ಥ, ವಿನಿಯೋಗ ಕ್ರಮವರಿತು ನಡೆಯುವುದು ಆಮೇಲೆ ಶ್ರೀಯುವರು ಆಸ್ಥಾನಕ್ಕೆ ದಯಮಾಡಿಸುವರು

# ಮೂರನೆಯ ಅಧ್ಯಾಯವು.

1, ಶ್ರೀ ಯೋಗಾನೃಸಿಹ್ಮ ಸ್ವಾಮಿಯವರ ದೇವಸ್ಥಾನದಲ್ಲಿಯು ನಿತ್ಯಕಟ್ಟಲೆಯು.

ದೇವಸ್ಥಾನದಲ್ಲಿಯೂ ದ್ವಿಕಾಲಪೂಜೆ ಅಂದರೆ ಪ್ರಾತಃಕಾಲ 8–30 ರಿಂದ 12 ರ ವರೆಗೂ, ಸಾಯಂಕಾಲ 6 ರಿಂದ 9 ರ ವರೆಗೂ, ಪಾಂಚರಾತ್ರಾಗಮದ ರೀತಿಯಲ್ಲಿ ತಿರುವಾರಾಧನೆ ಮುಂತಾದುವು ನಡೆಯುತ್ತವೆ.

ಪ್ರತಿದಿವಸದ ಪ್ರಾತಃಕಾಲ ಎಂಟುಘಂಟೆಗೆ ಕಲ್ಯಾಣಿಯಿಂದ ಅಗ್ರೋದಕವು ಬಂದು, ಸನ್ನಿಧಿಯ ಪಾತ್ರೆ ಮುಂತಾದುವು ಶುದ್ಧಿಯಾದ ನಂತರ, ಧೌತವಸ್ತ್ರಸಮರ್ಪಣೆ, ನಿತ್ಯಾನುಸಂಧಾನ ಸೇವೆ, ತೆರೆಯೊಳಗೆ

ತಿರುವಾರಾಧನೆ, ನಾರಾಯಣೋಪನಿಷತ್ತು, ತೈತ್ತಿರಿಯೋಪನಿಷತ್ತು, ಪಂಚ ಸೂಕ್ತಗಳ ಪಾರಾಯಣವು ನಡೆದು, ದೀಪ, ಧೂಪ ಸಮರ್ಪಣೆಯಿಂದ ಯಾತ್ರಾದಾನ, ಶಾತ್ತುಮುರೈಯಾದ ನಂತರ ಗೋಷ್ಠಿಗೆ ಶ್ರೀ ಶಠಗೋಪುರ, ಆಚಾರ್ಯಪುರುಷರುಗಳಿಗೆ ಮಾಲೆ, ರಾಜಮರ್ಯಾದೆ ಮುಂತಾಗಿ ನಡೆದು, ಗೋಷ್ಠಿಗೆ ತೀರ್ಥಪ್ರಸಾದ ವಿನಿಯೋಗವಾಗುತ್ತವೆ.

ಸಾಯಂಕಾಲ ಆರುಘಂಟೆಗೆ ಸನ್ನಿಧಿಯ ಬಾಗಿಲು ತೆಗೆದು ದೀಪಾರಾಧನೆಯಂಮಾಡಿ, ಶ್ರೀಯವರಿಗೆ ತಿರುವಾರಾಧನೆ, ದೋಸೆತಳಿಗೆ ನಿವೇದನ ದೀಪ, ಧೂಪಸಮರ್ಪಣೆ, ಮಂತ್ರಪುಷ್ಪ, ಸಹಸ್ರನಾಮಾರ್ಚನೆ, ಕ್ಷೀರಾನ್ನ, ಸಕ್ಕರೆಪೊಂಗಲ್ ನಿವೇದನವಾಗಿ, ಗೋಷ್ಠಿಗೆ ತೀರ್ಥಪ್ರಸಾದ ವಿನಿಯೋಗ ವಾಗುವುದು ಈ ದೇವಸ್ಥಾನಕ್ಕೆ ಹೆಚ್ಚಾಗಿ ಸರ್ಕಾರಿಯ ತಸ್ತೀಕು ಇಲ್ಲದಿದ್ದರೂ, ಭಕ್ತಾದಿಗಳು ಕಳ್ಳೈಕ್ಕಲೆಂಬ ಆಪದ್ರ್ಯೆಯನ್ನು ದೂರಮಾಡಿ ಅವಿಚ್ಛಿನ್ನವಾಗಿ ಶ್ರೀಶನ ಸೇವೆಯನ್ನು ನಡೆಸುತ್ತಲಿರುವರು

## ೨. ಹೆಚ್ಚುಕಟ್ಟಲೆಯ ಸೇವೆಗಳು.

---

(1) **ಸ್ಥಿರವಾರ.** ರಾತ್ರಿ ಶ್ರೀಯವರಿಗೆ ನಿತ್ಯಕಟ್ಟಲೆ ಸಹಸ್ರನಾಮವಾದನಂತರ, ಸ್ಥಿರವಾರದ ಕಟ್ಟಲೆಯ ಹುಳಿಯನ್ನವು ನಿವೇದನವಾಗಿ, ಆರತಿ ಸಮರ್ಪಣೆಯಾದ ನಂತರ ಅರುಳಪ್ಪಾಡು, ಮಠಮರ್ಯಾದೆ, ರಾಜಮರ್ಯಾದೆ ಮುಂತಾಗಿ ನಡೆದು, ಗೋಷ್ಠಿಗೆ ತೀರ್ಥ, ವಿನಿಯೋಗವು ಸಹ ನಡೆಯುವುದು.

(2) **ಸ್ವಾತೀನಕ್ಷತ್ರವು.** ಹಗಲು ಸಹಸ್ರ ನಾಮಾರ್ಚನೆಯಾದ ನಂತರ, ಶ್ರೀಯವರಿಗೆ ಪಂಚಾಮೃತಾಭಿಷೇಕ, ಅಲಂಕಾರ ಮುಂತಾದುದು ನಡೆದು ನಿತ್ಯಕಟ್ಟಲೆ ಮತ್ತು ಸ್ವಾತೀನಕ್ಷತ್ರದ ಕಟ್ಟಲೆಯ ನಿವೇದನ

ವಾಗಿ, ಶಾಸ್ತ್ರವಿಧಿಯಂತೆ ಶಾತ್ತುಮುರೈ ಮುಂತಾದುದು ನಡೆದು, ಸ್ಥಿರ ವಾರದ ಕಟ್ಟಲೆಯಪ್ರಕಾರ ಅರುಳಪ್ಪಾಡು ಮುಂತಾಗಿ ಜರುಗಿ, ಗೋಷ್ಠೀ ವಿನಿಯೋಗವು ನಡೆಯುವುದು.

(3) ದಕ್ಷಿಣಾಯನ ಮತ್ತು ಉತ್ತರಾಯಣ ಪುಣ್ಯಕಾಲವು, ತುಲಾ ಮತ್ತು ಮೇಷ ಸಂಕ್ರಮಣಗಳು

ಈ ನಾಲ್ಕು ಸಂಕ್ರಮಣಗಳಲ್ಲಿಯೂ ಸ್ವಾತಿನಕ್ಷತ್ರದ ಕಟ್ಟಲೆಯಂತೆ ಶ್ರೀಯುವರಿಗೆ ತಿರುವಾರಾಧನೆ, ಉಪಚಾರ ಮುಂತಾದುದು ನಡೆಯುವುದು

## (4) ಯುಗಾದಿ ಮತ್ತು ದೀಪಾವಳಿಯು.

ಇವುಗಳೆರಡೂ ಸ್ವಾತಿ ನಕ್ಷತ್ರದ ಕಟ್ಟಲೆಯಂತೆ ನಡೆಯುವುದು

## (5) ವಸಂತೋತ್ಸವವು.

ಮೇಷಮಾಸದಲ್ಲಿ ಪೌರ್ಣಮಿಯಾದ ನಂತರ ಬರುವ ಮೊದಲನೆಯ ಸ್ಥಿರವಾರದಲ್ಲಿ, ಹಗಲು ನಿತ್ಯಕಟ್ಟಲೆಯಾದ ತರುವಾಯ, ಹೆಚ್ಚುಕಟ್ಟಲೆ ಸಹಸ್ರನಾಮಾರ್ಚನೆಯು ನಡೆದು, ವಸಂತೋತ್ಸವದ ಪ್ರಯುಕ್ತ ಶ್ರೀಯುವರಿಗೆ ತೆರೆಯೊಳಗೆ ಪುಣ್ಯಾಹ ಸ್ತಪನ, ಮುಂತಾದುದು ನಡೆದು, ತಳಿಗೆ ನಿವೇದನವಾದ ನಂತರ, ತೆರತೆಗೆದು ಶ್ರೀಯುವರಿಗೆ ಶ್ರೀಸೂಕ್ತದಿಂದ ಹರಿದ್ರಾಚೂರ್ಣಾಭಿಷೇಕವಾಗಿ ಆರತಿಸಮರ್ಪಣೆಯಿಂದ, ಅರುಳಪ್ಪಾಡು ಮುಂತಾದುದು ನಡೆದು, ಗೋಷ್ಠಿಗೆ ವಸಂತ ವಿನಿಯೋಗವಾಗುವುದು. ಆಮೇಲೆ ಅಂಗಲೀಕನಿಗೆ (ಕಾವಲುಗಾರ) ಮಾಲೆಯಂಹಾಕಿ, ತಾಳ, ಮೇಳಗಳ ಮಂಗಳವಾದ್ಯಗಳೊಡನೆ ಕತ್ತಲುಪ್ರದಕ್ಷಿಣೆ ಮತ್ತು ಹೊರಗಣ ಪ್ರಾಕಾರ ಪ್ರದಕ್ಷಿಣೆಯಿಂದ ದೊಡ್ಡಗೋಪುರದ ವರೆಗೆ ಬಂದು, ಉಳಿದಿರುವ ವಸಂತವನ್ನು ಅವನಿಗೆ ಮಜ್ಜನಮಾಡಿಸಿ, ಕ್ರಮವರಿತು ಮರ್ಯಾದೆಯನ್ನು ಮಾಡುವರು.

## (6) ಶ್ರೀ ನೃಸಿಂಹ ಜಯಂತಿಯು.

ವೃಷಭಮಾಸ ಚತುರ್ದಶಿಯ ದಿವಸ ಹಗಲು ನಿತ್ಯಕಟ್ಟಲೆ, ಸಹಸ್ರನಾಮ ಮತ್ತು ತಳಿಗೆ ನಿವೇದನವಾದ ನಂತರ ಶ್ರೀಯುವರ ಜಯಂತಿಯ ಪ್ರಯುಕ್ತ, ಆಗಮಿಕರು ಸಭಾನುಜ್ಞೆಯಂ ಪಡೆದು, ತ್ರಯೋದಶ ಕಲ

ಶಸ್ಥಾಪನೆ, ರಕ್ಷಾಬಂಧನ, ಹೋಮ ಮುಂತಾದವುಗಳನ್ನು ಮಾಡಿ, ಶ್ರೀಯವರಿಗೆ ಹನ್ನೆರಡು ತಿರುವಾರಾಧನೆಯಿಂದ ಪಂಚಾಮೃತಾಭಿಷೇಕವನ್ನೂ, ಮತ್ತು ತ್ರಯೋದಶ ಕಲಶಾಭಿಷೇಕವಂ ಮಾಡಿ, ಮುಹೂರ್ತ ನಡೆದು, ಮಠಮರ್ಯಾದೆ, ರಾಜಮರ್ಯಾದೆಯಾಗಿ, ಶ್ರೀಯವರಿಗೆ ದೀಪ, ಧೂಪ ಸಮರ್ಪಣೆಯಿಂದ ಮಹಾಕುಂಭಾಭಿಷೇಕ ವಾಗಿ, ಅಲಂಕಾರ ಮುಂತಾದುದು ಜರುಗಿ, ಆಚಾರ್ಯಪುರುಷರುಗಳ ವರಶೆ ಅಂದರೆ ಶ್ರೀಯವರ ಮೇಲಣ ಚೂರ್ಣಿಕೆಗಳನ್ನು ಹೇಳಿ, ಶ್ರೀಮಠವೊದಲುಗೊಂಡು, ರಾಜಮರ್ಯಾದೆಯು ಪರ್ಯಂತರ, ತೀರ್ಥ ವರಶೆ ಮುಂತಾಗಿ ನಡೆದು, ತರುವಾಯು ಸೇವಾ ಕಾಲ, ಗದ್ಯತ್ರಯ ಪಾರಾಯಣ, ಕೋವಿಲ್ ತಿರುವಾಯಿಮೊಳಿ ಮುಂತಾದುದು ಸೇವೆಯಾಗಿ, ಜಯಂತಿಯ ಕಟ್ಟಲೆ ಪೊಂಗಲು, ಕಡುಬು, ಕಜ್ಜಾಯ ನಿವೇದನವಾಗಿ, ಆರತಿನಡೆದು, ನಿತ್ಯಕಟ್ಟಲೆ ಶಾತ್ತುಮುರೈ ಮುಂತಾದುದು ನಡೆದು, ಸ್ವಾತಿನಕ್ಷತ್ರದ ಕಟ್ಟಲೆಯಂತೆ ಶ್ರೀಶಠಗೋಪ, ತೀರ್ಥ, ವಿನಿಯೋಗ ಸಹ ನಡೆಯುವುದು.

## (7) ಪವಿತ್ರೋತ್ಸವವು

ಇದು ಭಾದ್ರಪದ ಶುದ್ಧ ದ್ವಾದಶಿಯಿಂದ ಆರುದಿವಸಗಳು ನಡೆಯುತ್ತವೆ. ಈ ಬೆಟ್ಟದ ಸನ್ನಿಧಿಯ ತಿರುಪವಿತ್ರವು ಶ್ರೀ ತಿರುನಾರಾಯಣಸ್ವಾಮಿಯವರ ಸನ್ನಿಧಿಯಲ್ಲಿ ಶಾಸ್ತ್ರೋಕ್ತವಾಗಿ ಪ್ರತಿಷ್ಠೆಯಾದ ತರುವಾಯ, ಇವುಗಳನ್ನು ಬೆಟ್ಟಸನ್ನಿಧಿಯ ಪರಿಚಾರಕರು ಮಂಗಳವಾದ್ಯಗಳೊಡನೆ ಒಂದು ಬೆಳ್ಳಿಯತಟ್ಟೆಯಲ್ಲಿ ಬಿಜಮಾಡಿಸಿಕೊಂಡು ಸನ್ನಿಧಿಗೆ ಬರುವರು. ನಂತರ ಈ ತಿರುಪವಿತ್ರಗಳಿಗೆ ಅರ್ಚಕರು ಪುಣ್ಯಾಹ ಪ್ರೋಕ್ಷಣೆಯಿಂದ ಶ್ರೀಯವರಿಗೆ ಧಾರಣೆಯಂಮಾಡಿ, ರಾತ್ರಿ ನಿತ್ಯಕಟ್ಟಲೆ ಮತ್ತು ಹೆಚ್ಚುಕಟ್ಟಲೆಯ ನಿವೇದನವಾಗಿ ಪದ್ಧತಿಯಂತೆ ತೀರ್ಥ ವಿನಿಯೋಗಾದಿಗಳು ನಡೆಯುವುವು. ಈ ರೀತಿಯಲ್ಲಿ ಐದುದಿನಗಳು ನಡೆದು, ಆರನೆಯದಿವಸ ಮೇಲ್ಕಂಡ ತಿರುಪವಿತ್ರಗಳನ್ನು ರಾತ್ರಿ ವಿಸರ್ಜನೆಯಿಂದ, ದೇವಸ್ಥಾನದ ಕಟ್ಟಲೆಯ ಮೇರೆಗೆ ಕೈಂಕರ್ಯಪರರಿಗೂ, ಆಚಾರ್ಯ ಪುರುಷರಿಗೂ, ರಾಜಮರ್ಯಾದೆ ಮುಂತಾಗಿ ನಡೆಯುವುದು.

## (8) ನವರಾತ್ರಿಯು.

ಆಶ್ವಯುಜ ಶುದ್ಧ ಪಾಡ್ಯಮಿಯಿಂದ ನವಮಿಯುವರೆಗೆ ಹಗಲು ನಿತ್ಯ ಕಟ್ಟಲೆಯ ತಳಿಗೆಯ ಜೊತೆಯಲ್ಲಿ, ನವರಾತ್ರಿಯ ತಳಿಗೆಯು ಶ್ರೀಯವರಿಗೆ ನಿವೇದನವಾಗುವುದು ಮಹಾನವಮಿಯದಿವಸ ರಾತ್ರಿ ನಿತ್ಯಕಟ್ಟಲೆಯಾದ ನಂತರ, ಶ್ರೀಯವರಿಗೂ, ಶ್ರೀಯವರ ಶಂಖ, ಚಕ್ರಾಯುಧಗಳಿಗೂ, ಪೂಜೋಪಕರಣಗಳಿಂದ ತಟ್ಟೆ, ಬಟ್ಟಲು, ಆರತಿ ಮುಂತಾದವುಗಳಿಗೂ ಮತ್ತು ಗರ್ಭಗೃಹ, ಶುಕನಾಸಿ, ಜಯವಿಜಯರು, ಗರುಡ, ಚಿನ್ನದ ಬಾಗಿಲು, ಕತ್ತಲು ಪ್ರದಕ್ಷಿಣೆಯಬಾಗಿಲು, ತಗಡು ನರಸಿಹ್ಮದೇವರು, ವಾರಶಾಲೆ ವಿಮಾನ ಮುಂತಾದವುಗಳಿಗೆ, ತೆಂಗಿನಕಾಯಿ ಸಮರ್ಪಣೆಯಿಂದ, ಗಂಧಾಕ್ಷತೆ ಪೂಜೆಗಳೂ ನಡೆದು, ಶಯ್ಯಾಸನದ ತಳಿಗೆಯು ನಿವೇದನವಾಗುವುದು.

## (9) ಅಷ್ಟ ತೀರ್ಥೋತ್ಸವವು.



ಕಾರ್ತೀಕ ಶುದ್ಧ ದಶಮಿಯ ದಿವಸ ಶ್ರೀ ಚಲುವರಾಯಸ್ವಾಮಿಯವರಿಗೆ ತಿರುಕ್ಕಲ್ಯಾಣಿಯಲ್ಲಿ ಅವಭೃತವಾದ ನಂತರ, ಅಷ್ಟತೀರ್ಥಗಳಲ್ಲಿ ಭಕ್ತಿಭಾವದಿಂದ ಸ್ನಾನವಂ ಮಾಡಿಕೊಂಡು ಸಂತಾನಾರ್ಥವಾಗಿ ಬರುವ ಭಕ್ತಾದಿಗಳು, ತಮ್ಮ ಮಡಿಲಿನಲ್ಲಿ ಹಂಣು ಕಾಯಿಗಳನ್ನು ಕಟ್ಟಿಕೊಂಡು ಗಿರಿಪ್ರದಕ್ಷಿಣೆಯಿಂದ ಬೆಟ್ಟದ ಸನ್ನಿಧಿಗೆ ಬಂದು, ದೇವಸ್ಥಾನಕ್ಕೆ ಎಂಟು ಆಣೆ ಕಾಣಿಕೆಯನ್ನು ಕೊಟ್ಟು, ಫಲಸಮರ್ಪಣೆಯಿಂದ ಪಿಂಡಪ್ರಸಾದ ಅಂದರೆ ಪೊಂಗಲಿನ ಉಂಡೆಯನ್ನು ಅರ್ಚಕರಿಂದ ಭಕ್ತಿಪುರಸ್ಸರವಾಗಿ ಸ್ವೀಕರಿಸಿ, ಭುಜಿಸುವರು ಇದರಿಂದ ಅನೇಕರಿಗೆ ಅವರವರ ಪೂರ್ವ ಸುಕೃತವಂತೆ, ಇಷ್ಟಾರ್ಥವು ಸಲ್ಲುವುದಲ್ಲದೆ, ಭೀತಿಶಂಕೆ ಮೊದಲಾದುದು ನಿವಾರಣೆಯಾಗುವುದು

## (10) ಕೃತ್ತಿಕೋತ್ಸವವು.

ವೃಶ್ಚಿಕಮಾಸದ ಪೌರ್ಣಮಿಯದಿವಸ ಹಗಲು ನಿತ್ಯಕಟ್ಟಲೆಯಾದ ನಂತರ, ಸ್ವಾತಿನಕ್ಷತ್ರದ ಕಟ್ಟಲೆಯಂತೆ ಶ್ರೀಯವರಿಗೆ ಅಭಿಷೇಕ, ಮುಂತಾದುದು, ನಡೆಯುವುದು. ರಾತ್ರಿ ನಿತ್ಯಕಟ್ಟಲೆಯಾದ ನಂತರ ದೀಪೋತ್ಸವದ ಉದ್ದಿಶ್ಯ, ಅರ್ಚಕರು ಸಭಾನುಜ್ಞೆಯಂ ಪಡೆದು, ದೀಪಗಳಿಗೂ, ಘಟಾರ್ತಿಗೂ, ಪುಣ್ಯಾಹ ಪ್ರೋಕ್ಷಣ, ಪಂಚಗವ್ಯಪ್ರೋಕ್ಷಣವಂ ಮಾಡಿ, ಪಾಠಶಾಲೆಯಲ್ಲಿ ಹೋಮಪೂರ್ವಕವಾಗಿ ದೀಪಪ್ರಜ್ವಾಲನವಂ ಮಾಡಿಕೊಂಡು, ಸ್ವಸ್ತಿವಾಚನದೊಂದಿಗೆ. ಸಮಸ್ತ ವಾದ್ಯ ಬಿರುದಾವಳಿಗಳೊಡನೆ ಆಲಯಪ್ರದಕ್ಷಿಣವಾಗಿ ಶ್ರೀಯುವರ ಸನ್ನಿಧಿಗೆ ಬಂದು, ಸ್ವಾಮಿಗೆ ಅಲಂಕಾರ, ತಿರುವಾರಾಧನೆ, ತಳಿಗೆ ನಿವೇದನ ಮುಂತಾದುದು ನಡೆದು ಮುಹೂರ್ತವಾಗಿ, ಮಠಮರ್ಯಾದೆ, ರಾಜಮರ್ಯಾದೆಗಳು ಪದ್ಧತಿಯಂತೆ ನಡೆದು, ಶ್ರೀಯವರಿಗೆ ವೇದಪಠನದಿಂದ ಘಟಾರ್ತಿ ಸಮರ್ಪಣೆಯಿಂದ, ದೀಪಸ್ತಂಭದಮೇಲೆ ಘಟಾರ್ತಿಯನ್ನಿಡುವರು. ತರುವಾಯ ದೊಡ್ಡಗೋಪುರದ ಬಾಗಿಲಿನಲ್ಲ ಚೊಕ್ಕಪಾನೆಯಂ (ಹೊಸಬಟ್ಟೆಯನ್ನು ವಿಧ್ಯುಕ್ತವಾಗಿ ಹಚ್ಚಿಸುವುದು) ಮಾಡುವರು.

## (11) ಧನುರ್ಮಾಸದ ಕಟ್ಟಲೆಯು.

ಧನುಸ್ಸಂಕ್ರಮಣ ಅಂದರೆ ಒಂದನೆಯ ತೇದಿಯಿಂದ ಮೂವತ್ತನೆಯ ತೇದಿಯವರಿಗೆ ಹಗಲು ನಿತ್ಯಕಟ್ಟಲೆಯಾದ ನಂತರ ಧನುರ್ಮಾಸ ಕಟ್ಟಲೆಯ ನಿವೇದನ ಮುಂತಾದುದು ನಡೆದು, ನಿತ್ಯಾನುಸಂಧಾನ ಸೇವೆ, ನಾಲ್ಕುಸಾವಿರ ಪ್ರಬಂಧದಲ್ಲಿ ದಿನಒಂದಕ್ಕೆ ಒಂದುನೂರು ಪಾಶರಗಳಂತೆ ಸೇವೆ, ಶಾತ್ತುಮರೈ, ತೀರ್ಥ, ವಿನಿಯೋಗವು ಪದ್ಧತಿಯಂತೆ ನಡೆಯುತ್ತವೆ. ಈ ಕಾಲದಲ್ಲಿ ನಾಳುಪಾಟು ಸೇವೆಗಳಿಗೂ, ಮತ್ತು ನಾಲ್ಕುಸಾವಿರ ಪ್ರಬಂಧಗಳಿಗೆ ತೊಡಕ ಮತ್ತು ಶಾತ್ತುಮುರೈಯೂ ನೇಮಿಯಾಗಿ, ಭಕ್ತಾದಿಗಳು ಸೇವಾರ್ಥಗಳನ್ನು ನಡೆಸಿಕೊಂಡು ಬರುತ್ತಿರುವರು.

# ಶ್ರೀ ವೈರಮುಡಿಯ ಉತ್ಸವವು.



ಮೀನಮಾಸದ ಪುಷ್ಯನಕ್ಷತ್ರದ ದಿವಸ ವೈರಮುಡಿ ಉತ್ಸವದ ಪ್ರಯುಕ್ತ, ಶ್ರೀಯವರಿಗೆ ನರಸಿಹ್ಮಜಯಂತಿಯ ಕಟ್ಟಲೆಯಂತೆ ಮಹಾಭಿಷೇಕವು ನಡೆಯುವುದು. ಪಂಚಮರು ಆಲಯ ಪ್ರವೇಶಮಾಡಿದ ಪ್ರಾಯಶ್ಚಿತ್ತಾರ್ಥವಾಗಿ, ಆಲಯದ ಶುದ್ಧಿಯಿಂದ, ಶಾಸ್ತ್ರೀಯಲ್ಲಿ, ಪಂಚಗವ್ಯ ಪ್ರೋಕ್ಷಣ, ಶಾಂತಿ ಹೋಮ, ಸ್ನಪನ ಸಹ ನಡೆಯುತ್ತದೆ. ವೈರಮುಡಿಯ ಉತ್ಸವದ ಮಧ್ಯಕಾಲದಲ್ಲಿ ಅಂದರೆ ಧಾರೆ, ನಾಗವಲ್ಲಿ, ಮತ್ತು ವೈರಮುಡಿಯ ದಿವಸಗಳಲ್ಲಿ ನಿತ್ಯಕಟ್ಟಲೆಯ ತಳಿಗೆಯ ಜೊತೆಯಲ್ಲಿ ಹೆಚ್ಚು ಕಟ್ಟಲೆಯ ತಳಿಗೆಯ ನಿವೇದನವಾಗಿ, ಗೋಷ್ಠಿಗೆ ವಿನಿಯೋಗ ಮುಂತಾದುದು ಜರುಗುವುದು.

# ನಾಲ್ಕನೆಯ ಅಧ್ಯಾಯವು.



(1) ದೇವಸ್ಥಾನಗಳ ವರಮಾನ ಮತ್ತು ಖರ್ಚು:—

ಮೇಲುಕೋಟೆಯ ಶ್ರೀ ತಿರುನಾರಾಯಣ ಸ್ವಾಮಿಯವರ ದೇವಸ್ಥಾನಕ್ಕೆ ನಗದು ದ್ರವ್ಯದಿಂದಲೂ, ಜಮೀನುಗಳ ಉತ್ಪತ್ತಿಯಿಂದಲೂ, ಸೇವಾರ್ಥದಾರರಿಂದಲೂ, ಬಡ್ಡಿ ಮುಂತಾದವುಗಳಿಂದಲೂ, ಸಾಲಿಯಾನ ಸರಾಸರಿ 21,650, ರೂ|| ಗಳೂ, ಶ್ರೀ ಯೋಗಾನೃಸಿಹ್ಮಸ್ವಾಮಿಯವರ ದೇವಸ್ಥಾನಕ್ಕೆ ಸಾಲಿಯಾನ 2,330, ರೂ|| ಗಳೂ. ಒಟ್ಟು 23,980 ರೂಪಾಯಿಗಳು ಹುಟ್ಟುವಳಿ ಇರುತ್ತವೆ

ಇದರಂತೆಯೇ ಶ್ರೀಯವರುಗಳ ದೇವಸ್ಥಾನಗಳ ಸಾಲಿಯಾನ ಖರ್ಚು ಸಹ ಈಕೆಳಗೆ ಕಂಡಂತೆ ಇರುತ್ತವೆ.

| ಶ್ರೀತಿರುನಾರಾಯಣ ಸ್ವಾಮಿಯವರ ದೇವಸ್ಥಾನಕ್ಕೆ. | ರೂ | ಶ್ರೀಯೋಗಾನೃಸಿಹ್ಮಸ್ವಾಮಿಯವರ ದೇವಸ್ಥಾನಕ್ಕೆ. | ರೂ. |
|---|---|---|---|
| ಸಿಬ್ಬಂದಿ— | 6,020. | ಸಿಬ್ಬಂದಿ— | 657 |
| ಸುತ್ತುಗುಡಿ— | 465. | ನಿತ್ಯಕಟ್ಟಲೆ ಮತ್ತು ಹೆಚ್ಚುಕಟ್ಟಲೆ | 986 |
| ನಿತ್ಯಕಟ್ಟಲೆ— | 8,265. | | |
| ಹೆಚ್ಚುಕಟ್ಟಲೆ— | 4,962 | | |
| ಅಂತು | 19,712 | ಅಂತು | 1,643 |

ನಿವಳ ರೂ. 21,355

1852 ಮತ್ತು 1900 ನೇ ಇಸವಿಗಳ ಗೌರ್ನಮೆಂಟ್ ಆರ್ಡರುಗಳಂತೆ ಈದೇವಸ್ಥಾನಕ್ಕೆ ಪೇಷ್ಕಾರ್, ಪಾರುಪತ್ಯದಾರ್, ಹೆಡ್‌ಗುಮಾಸ್ತೆ, ನಗದೀಗುಮಾಸ್ತೆ, ಜಿನಶಿಗುಮಾಸ್ತೆ, ಬೊಕ್ಕಸದಗುಮಾಸ್ತೆ, ಉಗ್ರಾಣದ ಮಣಿಯಗಾರ್, ಬಿಡುಮಣಿಯು, ಪ್ರಸಾದಮಣಿಯು, ಅರ್ಚಕರು, ಪರಿಚಾರಕರು, ಸ್ಥಾನೀಕರು, ಅಧ್ಯಾಪಕರು, ಮತ್ತು ಮಂತ್ರಪುಷ್ಪದವರೇ ಮುಂತಾಗಿ ಎರಡುನೂರು ಜನಗಳಿಗಿಂತ ಹೆಚ್ಚಾಗಿ ನೌಕರಮಾನೇರು ಇರುವರು. ದೇವಸ್ಥಾನದ ಆಡಳಿತವು ಪೇಷ್ಕಾರ್ರವರ ಅಧಿಕಾರಕ್ಕೆ ಒಳಪಟ್ಟು, ಕೆಲಸಕಾರ್ಯಗಳು ಸುಲಲಿತವಾಗಿ, ಕಾಲಕಾಲಕ್ಕೆ, ಪದ್ಧತಿಯನು ಸರಿಸಿ ನಡೆಯುತ್ತವೆ. ಇವುಗಳ ಮೇಲ್ವಿಚಾರಣೆಯನ್ನು ಶ್ರೀರಂಗಪಟ್ಟಣದ ಅಮಲ್ದಾರ್ರವರು, ಫ್ರೆಂಚ್‌ರಾಕ್ಸ್ ಸಬ್‌ಡಿವಿಜನ್ ಆಫೀಸರವರು, ಹ॥ ಮೈಸೂರುಡಿಸ್ಟ್ರಿಕ್ಟು ಡೆಪ್ಯುಟಿ ಕಮಿಷನರ್ ಸಾಹೇಬರವರು ನೋಡುತ್ತಲಿದ್ದಾರೆ.

ಹೆಚ್ಚು ಅಮಲ್‌ಗಳು ಇದ್ದಲ್ಲಿ ಮೆ॥ ಮುಜರೈ ಕಮಿಷನರವರು ಘನವನ್ನು ಹೊಂದಿದ ಮೈಸೂರು ಸರಕಾರದ ಅಭಿಮತದಂತೆ ಆಗಾಗ ತಕ್ಕಸಲಹೆಗಳನ್ನು ಕೊಡುವುದರಮೂಲಕ ಇತೋಪ್ಯತಿಶಯಿತವಾಗಿ ಕೆಲಸಕಾರ್ಯಗಳನ್ನು ನಡೆಸುತ್ತಲಿರುವರು.

(2) ದೇವಸ್ಥಾನಗಳಲ್ಲಿ ನಡೆಯುವ ಹೆಚ್ಚು ಕಟ್ಟಲೆಗಳ ಕೈಂಕರ್ಯಗಳು

| | ಹೆಸರು. | ಮೊಬಲಗು ರೂಪಾಯಿ |
|---|---|---|
| (1) | ಯುಗಾದಿ | 19—0—0 |
| (2) | ಬ್ರಹ್ಮೋತ್ಸವವು | 1000—0—0 |
| (3) | ಕೋಡೈ ತಿರುನಾಳ್ | 50—0—0 |
| (4) | ಶ್ರೀರಾಮಾನುಜಾಚಾರ್ಯರತಿರುನಕ್ಷತ್ರವು | 100—0—0 |
| (5) | ವರಾಹಜಯಂತಿಯು. | 10—0—0 |
| (6) | ವಸಂತೋತ್ಸವವು | 35—0—0 |
| (7) | ನಮ್ಮಾಳ್ವಾರವರತಿರುನಕ್ಷತ್ರವು | 15—0—0 |
| (8) | ಹನುಮಜ್ಜಯಂತಿಯು | 5—0—0 |
| (9) | ಪಲ್ಲವೋತ್ಸವವು. | 50—0—0 |
| (10) | ಸಾರ್ವೈಕಾದಶಿಯು | 40—0—0 |
| (11) | ಪ್ರಥಮೈಕಾದಶೀ. | 150—0—0 |
| (12) | ಶ್ರೀಕೃಷ್ಣರಾಜತಿರುನಾಳ್. | 2000—0—0 |
| (13) | ಶ್ರೀಯದುಗಿರಿಯಮ್ಮನವರವರ್ಧಂತಿಯು | 70—0—0 |
| (14) | ಆಡಿಶುಕ್ರವಾರದ ಸೇವೆಯು | 8—0—0 |
| (15) | ಉಪಾಕರ್ಮವು | 10—0—0 |
| (16) | ಶ್ರೀಪ್ರಸನ್ನಕೃಷ್ಣಸ್ವಾಮಿಯವರ ರಥೋತ್ಸವದ ಕಟ್ಟಲೆಯು | 0—8—0 |
| (17) | ಚಾತುರ್ಮಾಸ್ಯದ ಸಂಕಲ್ಪವು. | 2—4—0 |
| (18) | ಶ್ರೀಕೃಷ್ಣಜಯಂತಿಯು. | 95—0—0 |
| (19) | ಗೌರಿಯಹಬ್ಬವು. | 5—0—0 |
| (20) | ಗಣೇಶನಹಬ್ಬವು. | 5—0—0 |
| (21) | ಶ್ರೀ ವೇದಾಂತದೇಶಿಕರವರ ತಿರುನಕ್ಷತ್ರವು | 1—0—0 |
| (22) | ತಿರುಪವಿತ್ರೋತ್ಸವವು | 60—0—0 |
| (23) | ನವರಾತ್ರಿಯು | 300—0—0 |
| (24) | ಶ್ರೀ ಜೀಯರವರ ತಿರುನಕ್ಷತ್ರವು | 12—0—0 |

| | | |
|---|---|---|
| (25) | ಶ್ರೀಪಿಳ್ಳೈಲೋಕಾಚಾರ್ಯರ ತಿರುನಕ್ಷತ್ರವು | 1—0—0 |
| (26) | ಇತರ ಆಳ್ವಾರ್ ಆಚಾರ್ಯರುಗಳ ತಿರುನಕ್ಷತ್ರಗಳು | 9—0—0 |
| (27) | ದೀಪಾವಳಿ. | 10—0—0 |
| (28) | ಅಷ್ಟತೀರ್ಥೋತ್ಸವವು. | 155—0 0 |
| (29) | ಬೃಂದಾವನೋತ್ಸವವು. | 35—0—0 |
| (30) | ಕೌಶಿಕದ್ವಾದಶಿಯು, | 3—0—0 |
| (31) | ಕೃತ್ತಿಕೋತ್ಸವವು. | 25—0—0 |
| (32) | ಧನುಸ್ಸಂಕ್ರಮಣವು. | 45—0—0 |
| (33) | ಶ್ರೀಯದುಗಿರಿಯಮ್ಮನವರ ಥಡಾಉತ್ಸವವು | 15—0—0 |
| (34) | ಕೊಠಾರೋತ್ಸವವು. | 450—0—0 |
| (35) | ಅಧ್ಯಯನೋತ್ಸವವು | 27—0—0 |
| (36) | ಗರುಡಜಯಂತಿಯು | 3—0—0 |
| (37) | ರಥಸಪ್ತಮಿಯು. | 12—0—0 |
| (38) | ಶ್ರೀಮಧ್ವನವಮಿಯು. | 14—0—0 |
| (39) | ಪುನರ್ವಸು ಉತ್ಸವವು. | 0—8—0 |
| (40) | ತೆಪ್ಪೋತ್ಸವವು. | 100—0—0 |
| (41) | ಸುಬ್ರಾಯನಷಷ್ಠಿಯು. | 1—0—0 |
| (42) | ಗ್ರಾಮದೇವತೆಯ ಉತ್ಸವವು. | 1—0—0 |
| (43) | ಶ್ರೀರಾಮನವಮಿಯ ಉತ್ಸವವು. | 5—0—0 |

ಷರಾ:—ಮೇಲ್ಕಂಡ ಉತ್ಸವಗಳು ಜರುಗುವ ತಪಸೀಲನ್ನು ಎರಡನೆಯ ಅಧ್ಯಾಯದಲ್ಲಿ ವಿವರಿಸಿದೆ.

## 3 ರುಸುಂ ಪಟ್ಟಿಯು.

ಶ್ರೀ ಶಲ್ವತಿರುನಾರಾಯಣಸ್ವಾಮಿ ಮತ್ತು ಶ್ರೀ ಯೋಗಾನರಸಿಹ್ಮಸ್ವಾಮಿಯವರ ದೇವಸ್ಥಾನಗಳಲ್ಲಿ ಭಕ್ತಾದಿಗಳು ನಡೆಸತಕ್ಕ ಸೇವೆಗಳಿಗೆ

ಕೊಡಬೇಕಾದ ರುಸುಂ ವಿಚಾರದಲ್ಲಿ ಘನವನ್ನು ಹೊಂದಿದ ಮೈಸೂರು ಸರ್ಕಾರದವರು 1-4-31 ನೆಯ ಮರ್ಸ್ಕಂ 2172-74 July 24-30-9 ನೇ ನಂಬರಿನ ಆರ್ಡರಿನಲ್ಲಿ ಉಕ್ತವಾಗಿರುವಂತೆ, ಈ ಕೆಳಗೆ ಕಂಡ ರೀತಿಯಲ್ಲಿ ಕ್ರಮವರಿತು ದೇವಸ್ಥಾನದ ಕಚೇರಿಗೆ ಪಾವತಿಮಾಡಿ, ಸೇವಾರ್ಥಗಳನ್ನು ನಡಿಸಬಹುದಾಗಿರುತ್ತವೆ.

| | ಸೇವೆಗಳು | ರುಸುಂ. ರೂ. | ಆ | ಪೈ. |
|---|---|---|---|---|
| 1 | ಅಷ್ಟೋತ್ತರಕ್ಕೆ. | 0 | 6 | 0 |
| 2 | ಸಹಸ್ರನಾಮಾರ್ಚನೆಗೆ. | 1 | 8 | 0 |
| 3 | ಶ್ರೀರಾಮಾನುಜಾಚಾರ್ಯರಿಗೆ ಮಾತ್ರ ಅಭಿಷೇಕಕ್ಕೆ. | 3 | 0 | 0 |
| 4. | ಶ್ರೀಚಲುವರಾಯಸ್ವಾಮಿಯವರೊಬ್ಬರಿಗೆ. | 3 | 0 | 0 |
| 5 | ಶ್ರೀಚಲುವರಾಯಸ್ವಾಮಿಯವರು ಮತ್ತು ಶ್ರೀಉಭಯನಾಚ್ಚಿಯಾರ್ ಸಹಿತ | 3 | 8 | 0 |
| 6 | ಶ್ರೀಚಲುವರಾಯಸ್ವಾಮಿಯವರು, ಉಭಯನಾಚ್ಚಿಯಾರ್, ಮತ್ತು ಶ್ರೀರಾಮಾನುಜಾಚಾರ್ಯರಸಮೇತ ಶ್ರೀಚಲುವರಾಯಸ್ವಾಮಿಯವರ ಸನ್ನಿಧಿಯಲ್ಲಿ ಅಭಿಷೇಕವಾದರೆ | 4 | 0 | 0 |
| 7 | ಮೇಲ್ಕಂಡಂತೆ ಶ್ರೀರಾಮಾನುಜಾಚಾರ್ಯರ ಸನ್ನಿಧಿಯಲ್ಲಿ ಅಭಿಷೇಕವು. | 4 | 4 | 0 |
| 8 | ಶ್ರೀಚಕ್ರತ್ತಾಳ್ವಾರಿಗೆ ಅಭಿಷೇಕವಾದರೆ | 3 | 0 | 0 |
| 9 | ಶ್ರೀಅಮ್ಮನವರಿಗೆ ಅಭಿಷೇಕವಾದರೆ | 3 | 0 | 0 |
| | **ಉತ್ಸವಗಳು** | | | |
| 10 | ಶ್ರೀಚಲುವರಾಯಸ್ವಾಮಿಯವರೊಬ್ಬರಿಗೆ ಉತ್ಸವವಾಗಿ ತಮ್ಮ ಸನ್ನಿಧಿಗೆ ಬಿಜಮಾಡಿಸಿದರ | 4 | 8 | 0 |

| | | | |
|---|---|---|---|
| 11. ಶ್ರೀಚೆಲುವರಾಯಸ್ವಾಮಿಯವರೊಬ್ಬರೇ ಇತರ ಮಂಟಪಗಳಿಗೆ ಬಿಜಮಾಡಿದರೆ. | 4 | 8 | 0 |
| 12 ಶ್ರೀಚೆಲುವರಾಯಸ್ವಾಮಿಯವರೊಬ್ಬರೇ ಇತರ ಸನ್ನಿಧಿಗಳಿಗೆ ಬಿಜಮಾಡಿದರೆ. | 5 | 0 | 0 |
| 13. ಶ್ರೀಚೆಲುವರಾಯಸ್ವಾಮಿಯವರು ಶಠಾರಿಯೊಡನೆ ಬಿಜಮಾಡಿದರೆ. | 5 | 4 | 0 |
| 14 ಶ್ರೀಚೆಲುವರಾಯಸ್ವಾಮಿಯವರು ಉಭಯನಾಚ್ಚಿಯಾರ್ ಮತ್ತು ಶ್ರೀರಾಮಾನುಜಾಚಾರ್ಯರ ಸಹಿತ ಮಂಟಪ್ಪಡಿ ಉತ್ಸವಕ್ಕೆ ಬಿಜಮಾಡಿದರೆ. | 6 | 0 | 0 |
| 15. ಶ್ರೀಚೆಲುವರಾಯಸ್ವಾಮಿಯವರು ಉಭಯನಾಚ್ಯಾರ್ ಮತ್ತು ಶ್ರೀರಾಮಾನುಜಾಚಾರ್ಯರ ಸಹಿತ ಮಂಟಪ್ಪಡಿ ಮೇರೆ ಪ್ರಭಾವಳಿ ಸಹಿತ ಬಿಜಮಾಡಿದರೆ | 6 | 4 | 0 |
| 16. ಶ್ರೀಚೆಲುವರಾಯಸ್ವಾಮಿಯವರು ಉಭಯನಾಚ್ಚಿಯಾರ್ ಮತ್ತು ಶ್ರೀರಾಮಾನುಜಾಚಾರ್ಯರ ಸಹಿತ ಮಂಟಪ್ಪಡಿ ಮೇರೆ ಪ್ರಭಾವಳಿ ಯಿಲ್ಲದೆ ಇತರ ಸನ್ನಿಧಿಗಳಿಗೆ ಬಿಜಮಾಡಿದರೆ. | 6 | 8 | 0 |
| 17. ಶ್ರೀಚೆಲುವರಾಯಸ್ವಾಮಿಯವರು ಉಭಯನಾಚ್ಚಿಯಾರ್ ಮತ್ತು ಶ್ರೀರಾಮಾನುಜಾಚಾರ್ಯರ ಸಹಿತ ಮಂಟಪ್ಪಡಿಮೇರೆ ಪ್ರಭಾವಳಿ ಸಹಿತ ಇತರ ಸನ್ನಿಧಿಗೆ ಬಿಜಮಾಡಿದರೆ. | 6 | 12 | 0 |
| 18. ಶ್ರೀಚೆಲುವರಾಯಸ್ವಾಮಿಯವರು ಉಭಯನಾಚ್ಚಿಯಾರ್ ಮತ್ತು ಶ್ರೀರಾಮಾನುಜಾಚಾರ್ಯರ ಸಹಿತ ಮಂಟಪ್ಪಡಿಮೇರೆ ಶಠಾರಿ ಸಹಿತ ಬಿಜಮಾಡಿದರೆ. | 7 | 0 | 0 |
| 19. ಶ್ರೀವೈರಮುಡಿ ಉತ್ಸವದಲ್ಲಿ ಮಂತ್ರಿಯರ ಮಂಟಪಕ್ಕೆ ಶ್ರೀಯವರು ಉಭಯನಾಚ್ಚಿಯಾರ್ ಮತ್ತು ಶ್ರೀರಾಮಾನುಜಾಚಾರ್ಯರ ಸಹಿತ ಬಿಜಮಾಡಿದರೆ | 2 | 0 | 0 |
| 20. ಶ್ರೀವೈರಮುಡಿಉತ್ಸವದಲ್ಲಿ ಮಂತ್ರಿಯವರ ಮಂಟ | | | |

| | | | |
|---|---|---|---|
| ಪಕ್ಕೆ ಸಂದರ್ಭದಲ್ಲಿ ವಾನಮಾಮಲೈಮಠಕ್ಕೆ ಬಿಜಮಾಡಿದರೆ ( ಪ್ರಭಾವಳಿಸಹಿತ ) | 6 | 0 | 0 |
| 21. ಶ್ರೀವೈರಮುಡಿಉತ್ಸವದಲ್ಲಿ ಮಂತ್ರಿಯವರ ಮಂಟಪಕ್ಕೆ ಅಹೋಬಿಲಮಠ ಮತ್ತು ಬೃಂದಾವನದ ಮಂಟಪಕ್ಕೆ ಬಿಜಮಾಡಿದರೆ. | 5 | 0 | 0 |
| 22. ಶ್ರೀವೈರಮುಡಿ ಉತ್ಸವದಲ್ಲಿ ಮಂತ್ರಿಯವರ ಮಂಟಪಕ್ಕೆ, ತಂಗಳನ್ನದ ಮಂಟಪಕ್ಕೆ ಪಲ್ಲಕ್ಕಿ ಉತ್ಸವ, ಶ್ರೀಚಲುವರಾಯಸ್ವಾಮಿಯವರಿಗೆ ಮಾತ್ರ. | 4 | 8 | 0 |
| 23. ಶ್ರೀವೈರಮುಡಿಉತ್ಸವದಲ್ಲಿ ಮಂತ್ರಿಯವರ ಮಂಟಪಕ್ಕೆ ಚಿನ್ನದ ಪಲ್ಲಕ್ಕಿಉತ್ಸವ, ಶ್ರೀಚಲುವರಾಯಸ್ವಾಮಿಯವರಿಗೆ ಮಾತ್ರ. | 6 | 8 | 0 |
| 24. ಶ್ರೀವೈರಮುಡಿಉತ್ಸವದಲ್ಲಿ ಮಂತ್ರಿಯವರ ಮಂಟಪಕ್ಕೆ ಚಿಂತಾಮಣಿಯವರ ಅರುಳಪ್ಪಾಡಿಗೆ, ಶ್ರೀವೇದಾಂತಾಚಾರ್ಯರಸನ್ನಿಧಿಯಲ್ಲಿ | 4 | 0 | 0 |
| 25 ಶ್ರೀವೈರಮುಡಿಉತ್ಸವದಲ್ಲಿ ಧ್ವಜಾರೋಹಣ ದಿವಸ ಮಧ್ಯಮಂಟಪದ ಅರುಳಪ್ಪಾಡಿಗೆ. | 3 | 0 | 0 |
| 26. ಅರುಳಪ್ಪಾಡಿಗೆ. | 3 | 0 | 0 |
| 27. ಅರುಳಪ್ಪಾಡಿಗೆ ಶ್ರೀರಾಮಾನುಜಾಚಾರ್ಯರ ಸನ್ನಿಧಿಯಲ್ಲಿ ಪುನರ್ವಸು ಉತ್ಸವದ ದಿವಸವಾದರೆ | 2 | 8 | 0 |
| 28. ಶ್ರೀಯವರಿಗೆ ಗರುಡೋತ್ಸವ ವಗೈರೆ ವಾಹನೋತ್ಸವವಾದರೆ. | 10 | 4 | 0 |
| 29. ಅಷ್ಟತೀರ್ಥದಲ್ಲಿ ಶಠಾರಿ ಮಂಟಪಡಿಗೆ. | 3 | 0 | 0 |
| 30. ಶಠಾರಿಪ್ರತಿಷ್ಠೆಗೆ. | 26 | 0 | 0 |
| 31 ಮಂಟಪ ಪ್ರತಿಷ್ಠೆಗೆ. | 26 | 0 | 0 |
| 32 ಬಾಯಿಬೀಗ, ೧ ಕ್ಕೆ. | 1 | 4 | 0 |
| 33. ಮುಡಿ, ೧ ಕ್ಕೆ. | 0 | 4 | 0 |
| 34. ಘಂಟೆ ಪ್ರತಿಷ್ಠೆಗೆ. | 5 | 0 | 0 |

| | | | |
|---|---|---|---|
| 35. ನಗ ಸಮರ್ಪಣೆಗೆ ಬೆಲೆ (a) 50 ರೂಪಾಯಿಗೆ ಕಮ್ಮಿ ಇದ್ದರೆ | 0 | 8 | 0 |
| (b) 50 ಕ್ಕೆ ಮೀರಿ 100 ವರೆಗೆ. | 1 | 0 | 0 |
| (c) 100 ರೂಪಾಯಿಗೆ ಮೇಲ್ಪಟ್ಟರೆ. | 2 | 0 | 0 |
| 36. ವಾಹನ ಪ್ರತಿಷ್ಠೆಗೆ. | 13 | 0 | 0 |
| 37. ಮಣೇದಸೇವೆಗೆ | 0 | 1 | 0 |
| 38. ಗೊಂಬೆಕಾಣಿಕೆಗೆ. | 1 | 0 | 0 |
| 39. ವಸ್ತ್ರಸಮರ್ಪಣೆಗೆ (a) ಕಿಮ್ಮತ್ತು 10 ರೂ ಒಳಗಿದ್ದರೆ. | 0 | 4 | 0 |
| (b) 10 ರಿಂದ 50 ರ ಒಳಗಿದ್ದರೆ. | 0 | 8 | 0 |
| (c) 50 ರಿಂದ 100 ಒಳಗಿದ್ದರೆ. | 1 | 0 | 0 |
| (d) 100 ಕ್ಕೆ ಮೇಲ್ಪಟ್ಟರೆ. | 2 | 0 | 0 |
| 40. ಚರವುಕೂಲಿ ಸೇರು ೧ಕ್ಕೆ. | 0 | 0 | 3 |
| 41. ಚೌಲಿ. | 0 | 4 | 0 |
| 42. ಯಂತ್ರ. | 0 | 4 | 0 |
| 43. ಕಿವಿಚುಚ್ಚುವುದು. | 0 | 6 | 0 |
| 44. ನಾಮಕರಣಕ್ಕೆ. | 0 | 6 | 0 |
| 45. ಸಮಾರಾಧನೆ (a) 50 ಸೇರು ಕಮ್ಮಿಯಾದಲ್ಲಿ ಚರವು ಕೂಲಿಯಲ್ಲದೆ ಕಲಾಯಿ 2 ಆಣೆ, ಪಾಕೇಜಾ 4 ಆಣೆ | 0 | 6 | 0 |
| (b) 50 ಸೇರಿಗೆ ಮೇಲಾದಲ್ಲಿ ಚರವು ಕೂಲಿಯಲ್ಲದೆ ಕಲಾಯಿ 4 ಆಣೆ, ಪಾಕೇಜಾ 0-8-0 | 0 | 12 | 0 |
| 46. ಮದುವೆ, ಮುಂಜಿ ವಗೈರೆ ಇತರ ಶುಭಕಾರ್ಯಗಳಿಗೆ ಬೆಟ್ಟದಮೇಲಾಗಲಿ, ಕಲ್ಯಾಣ ಮಂಟಪದಲ್ಲಾಗಲಿ, ದೇವಸ್ಥಾನದಲ್ಲಿ ಎಲ್ಲಿಯೇ ಆಗಲಿ. | 1 | 0 | 0 |
| 47. ದೇವರಿಗೆ ಒಡೆಯತಕ್ಕ ತೆಂಗಿನಕಾಯಿ 1 ಕ್ಕೆ. | 0 | 0 | 1 |
| 48. ಶ್ರೀರಾಮಾನುಜಾಚಾರ್ಯರಸನ್ನಿಧಿಯಲ್ಲಿಅಷ್ಟೋತ್ತರಕ್ಕೆ. | 0 | 6 | 0 |
| 49. ಸಹಸ್ರನಾಮಾರ್ಚನೆ. | 1 | 8 | 0 |

## ಬೆಟ್ಟದ ಶ್ರೀಯೋಗಾನೃಸಿಹ್ಮಸ್ವಾಮಿಯವರ ಸನ್ನಿಧಿಯಲ್ಲಿ ನಡೆಸತಕ್ಕ ಸೇವೆಗಳಿಗೆ

| | | | |
|---|---|---|---|
| 50 ಅಭಿಷೇಕಕ್ಕೆ. | 2 | 8 | 0 |
| 51. ಬೃಂದಾವನದ ಸೇವೆಗೆ. | 1 | 0 | 0 |
| 52. ಪಿಂಡಕಾಣಿಕೆಗೆ | 0 | 8 | 0 |
| 53 ಬಿಲದ್ವಾರ ಪ್ರದಕ್ಷಿಣೆಗೆ. | 0 | 2 | 0 |
| 54. ಮೆಟ್ಟಲುಕಾಯಿ ಒಡೆಯುವುದಕ್ಕೆ | 1 | 0 | 0 |
| 55, 9 ಮೆಟ್ಟಲಿಗೆ ಕಾಯಿಒಡೆಯುವುದಕ್ಕೆ. | 0 | 2 | 0 |
| 56. ಅಷ್ಟೋತ್ತರಕ್ಕೆ. | o | 6 | o |
| 57. ಸಹಸ್ರನಾಮಾರ್ಚನೆಗೆ. | 1 | 8 | o |
| 58. ಗೊಂಬೆಕಾಣಿಕೆಗೆ. | 1 | o | o |

ಷರಾ:- ಹೆಚ್ಚಿಗೆ ತಪ್ಸೀಲು ಬೇಕಾಗಿದ್ದಲ್ಲಿ ಈ ಸಂಬಂಧದ ಗೌರ್ನ್ಮೆಂಟ್ ಆರ್ಡರ್‌ನ್ನು ಪರಾಂಬರಿಸಬಹುದು.

ತಿರುಪತಿ ಮೊದಲಾದ ಕಡೆಗಳಲ್ಲಿ ಸೇವಾರ್ಥದಾರರಿಂದ ಹಣವನ್ನು ವಸೂಲ್ಮಾಡಿಕೊಂಡು, ದೇವಸ್ಥಾನದವರೇ ಪದಾರ್ಥಗಳನ್ನು ಒದಗಿಸಿಕೊಂಡು ಆರ್ಜಿತ ನಿವೇದನಗಳನ್ನು ಮಾಡುವುದರಿಂದಲೂ, ಹೊರಗಡೆಯಿಂದ ಬರುವ ಭಕ್ತಾದಿಗಳು ಸೇವಾರ್ಥವನ್ನು ನಡೆಸಲು ತಾವೇ ಪದಾರ್ಥಗಳನ್ನು ಒದಗಿಸಿಕೊಡುವುದು ಕಷ್ಟಕರವೆಂತಲೂ, ಆದುದರಿಂದ ನಿವೇದನಕ್ಕೆ ಬೇಕಾಗುವ ಮೊಬಲಗನ್ನು ಮುಂದಾಗಿ ವಸೂಲ್ಮಾಡಿಕೊಂಡು, ಪದಾರ್ಥಗಳನ್ನು ದೇವಸ್ಥಾನದ ಉಗ್ರಾಣದಿಂದ ಖರ್ಚುಹಾಕಿಸಿ, ದೇವಸ್ಥಾನದವರೇ ಸೇವೆಯನ್ನು ನಡೆಸಿಕೊಟ್ಟಲ್ಲಿ ಅನುಕೂಲವಾಗುವುದೆಂದು ಅನೇಕ ಭಕ್ತಾದಿಗಳು ಹೇಳಿಕೊಳ್ಳುತ್ತಲಿರುವರು.

### (4) ದೇವಸ್ಥಾನಕ್ಕೆ ಸೇರಿದ ಇನಾಂ ಮತ್ತು ಸರ್ಕಾರಿ ಜಮೀನುಗಳು

ಇಲ್ಲಿಯ ದೇವಸ್ಥಾನಗಳಿಗೆ ಅನೇಕ ಸ್ಥಳಗಳಲ್ಲಿ ಸರ್ಕಾರಿ ಮತ್ತು ಇನಾಂ ಜಮೀನುಗಳಿರುತ್ತವೆ. ಇವು ಶ್ರೀರಂಗಪಟ್ಟಣ, ಕೃಷ್ಣರಾಜಪೇಟೆ, ಹುಣಸೂರು, ನಾಗಮಂಗಲ ತಾಲ್ಲೂಕುಗಳಲ್ಲಿರುತ್ತವೆ. ಇವುಗಳ ನಿಗಾ

ವಣೆಯನ್ನು ಘನಸರ್ಕಾರದವರು ನಿಗಾನೋಡಿಕೊಂಡು, ಬಂದ ಉತ್ಪತ್ತಿಯನ್ನು ದೇವಸ್ಥಾನದ ಲೆಖ್ಖಕ್ಕೆ ಜಮಾಕೊಡುತ್ತಲಿರುವರು

## (5) ದೇವಸ್ಥಾನದ ಪುದುವಟ್ಟು ಫಂಡು.



ಶ್ರೀ ಶಲ್ವತಿರುನಾರಾಯಣರ ಸನ್ನಿಧಿಯಲ್ಲಿಯೂ, ಶ್ರೀ ಯೋಗಾನರಸಿಹ್ಮಸ್ವಾಮಿಯವರ ಸನ್ನಿಧಿಯಲ್ಲಿಯೂ, ಶ್ರೀ ಭಾಷ್ಯಕಾರರ ಸನ್ನಿಧಿಯಲ್ಲಿಯೂ, ಶ್ರೀ ವೇದಾಂತದೇಶಿಕರವರ ಸನ್ನಿಧಿಯಲ್ಲಿಯೂ, ಮತ್ತು ಶ್ರೀ ಜೀಯರ್‌ಸ್ವಾಮಿಗಳ ಸನ್ನಿಧಿಯಲ್ಲಿಯೂ ಸೇವೆಗಳು ಆ ಚಂದ್ರಾರ್ಕವಾಗಿ ನಡೆಯಲು ಅನೇಕ ಭಕ್ತಾದಿಗಳು ಪುದುವಟ್ಟು ಮೊಬಲಗನ್ನೂ, ಕೆಲವರು ಜಮೀನುಗಳನ್ನೂ, ಕೊಟ್ಟಿರುವರು ಸೇವಾರ್ಥದಾರರುಗಳ ಕೋರಿಕೆಯಂತೆ ಸಕಾಲದಲ್ಲಿ ಸೇವೆಗಳನ್ನು ದೇವಸ್ಥಾನದವರು ಬಹಳ ಶ್ರದ್ಧೆಯಿಂದ ನಡೆಸುತ್ತಲಿರುವರು ಇಂತಹ ಭಕ್ತಾದಿಗಳು ಬಹುಮಂದಿ ಇರುವುದರಿಂದ, ಹೆಚ್ಚುಹಣವನ್ನು ಕೊಟ್ಟಿರುವ ಕೆಲವು ಮಹನೀಯರ ಹೆಸರನ್ನು ಇಲ್ಲಿ ಕೊಂಚಮಟ್ಟಿಗೆ ವಿವರಿಸಿದೆ.

| ಹೆಸರು | ಸೇವಾರ್ಥದಹೆಸರು. | ಮೊಬಲಗು |
|---|---|---|
| ಶ್ರೀ॥ಮ॥ಬೆಳ್ಳಿವರದಾಚಾರ್ಯರು | ಶ್ರೀ ತಿರುನಾರಾಯಣನ ದೇವಸ್ಥಾನದಲ್ಲಿಸ್ತೋತ್ರ ಪಾಠ ಪಾರಾಯಣ ಮುಂತಾದುವುಗಳಿಗೆ. | ರೂ 3500. |
| ಶ್ರೀ॥ ಅಯೋಧ್ಯೆ ಶ್ರೀರಂಗಮ್ಮನವರು. | ಶಾತ್ತುಮುರೈ ಮತ್ತು ನಿವೇದನಕ್ಕೆ. | ರೂ 800 |
| ಶ್ರೀ ಮ ವೆಂಕಟ ವರದೈಯ್ಯಂಗಾರ್ಯರು. | ಪ್ರತಿಶುಕ್ರವಾರದ ನಿವೇದನಕ್ಕೆ. | ರೂ. 400 |
| ,, ,, ಬಿ ಸಿ. ಗರುಡಾಚಾರ್ಯರು | ಶ್ರೀ ವೈರಮುಡಿಉತ್ಸವದಲ್ಲಿ ಮತ್ತು ಶ್ರೀ। ದೇಶೀ | |

| | | |
|---|---|---|
| | ಕರವರ ಸನ್ನಿಧಿಯಲ್ಲಿಅರುಳ ಪ್ಪಾಡಿಗೆ, ಪೊಂಗಲ್ ನಿವೇದನಕ್ಕೆ. | ರೂ. 700. |
| ಶ್ರೀ ಸೀತಮ್ಮನವರು | ಕಾರ್ತೀಕಶುದ್ಧ ಪೌರ್ಣಮಿ ಯಲ್ಲಿ ಶ್ರೀ ದೇಶಿಕರವರ ಸನ್ನಿಧಿಯಲ್ಲಿ ಸಮಾರಾಧನೆಗಾಗಿ. | ರೂ 400 |
| ಶ್ರೀವೀಣೆಯದುಗಿರಿಯಮ್ಮವರು. | ತಿರುನಕ್ಷತ್ರದ ಐದನೆಯ ಉತ್ಸವದಲ್ಲಿ ಅಭಿಷೇಕ ಮತ್ತು ನಿವೇದನಕ್ಕೆ. | ರೂ. 500. |
| ಶ್ರೀ. ಮ. ಕೃಷ್ಣಮಾಚಾರ್ | ಶ್ರೀ ವೇದಾಂತಾಚಾರ್ಯರವರ ಸನ್ನಿಧಿಯಲ್ಲಿ ವೈಶಾಖಮಾಸ ವಿಶಾಖಾನಕ್ಷತ್ರದಲ್ಲಿ ಸಂತರ್ಪಣೆಗಾಗಿ. | ರೂ. 224. |
| ಶ್ರೀ.ಮ.ವೆಂಕಟರಮಣಶೆಟ್ರುವರು | ಅಪ್ಪತೀರ್ಥದ ದಿವಸ ತೊಟ್ಟಿಲುಮಡುವಿನಲ್ಲಿ ನಿವೇದನ ಮತ್ತು ವಿನಿಯೋಗಕ್ಕೆ | ರೂ. 200. |
| ಶ್ರೀ.ಮ. ಗರುಡಾಚಾರ್ಯರು. | ಶ್ರೀ ಭಾಷ್ಯಕಾರರ ತಿರು ನಕ್ಷತ್ರದದಿವಸ ಶ್ರೀಯದು ಗಿರಿಯಮ್ಮನವರಸನ್ನಿಧಿಯಲ್ಲಿ ಕೈಂಕರ್ಯಕ್ಕೆ. | ರೂ. 250. |
| ಶ್ರೀ.ಮ. ತಿರುಮಲಾಚಾರ್ಯರು. | ಶ್ರವಣನಕ್ಷತ್ರ ಸೇವೆಗೆ. ಶ್ರೀಪಿಳ್ಳೈ ಲೋಕಾಚಾರ್ಯರ ಸನ್ನಿಧಿಯಲ್ಲಿ ನಿವೇದನ ಮುಂತಾದ್ದಕ್ಕೆ. | ರೂ. 200. |
| ಶ್ರೀ. ಶೇಷಮ್ಮನವರು. | ತುಲಾಮಾಸದಲ್ಲಿ ಶ್ರೀ ಜೀಯರ್‌ರವರ ಸನ್ನಿಧಿ ಯಲ್ಲಿ ಶಾತ್ತುಮುರೈಮುಂ ತಾದವುಗಳಿಗೆ. | ರೂ. 300. |

| | | | |
|---|---|---|---|
| ಶ್ರೀ. ಕಲ್ಯಾಣಮ್ಮನವರು. | ವೃಶ್ಚಿಕ ಮಾಸದಲ್ಲಿನ ಮಖಾ ನಕ್ಷತ್ರದ ದಿವಸ ಶ್ರೀಯವರಿಗ ಅಷ್ಟೋತ್ತರ ಮತ್ತು ಸಂತರ್ಪಣೆಗೆ | ರೂ. | 200 |
| ಶ್ರೀ. ಅಲುಮೇಲಮ್ಮನವರು. | ಶ್ರೀ ಅಮ್ಮನವರ ವರ್ಧಂತಿಯ ನೇತಃ ಸೇವೆ ಮತ್ತು ನಿವೇದನಕ್ಕೆ. | ರೂ | 200 |
| ಶ್ರೀ. ಮ ರಾವ್‌ಬಹದ್ದೂರ್. ಶ್ರೀನಿವಾಸೈಯ್ಯಂಗಾರ್ಯರು. | ಶ್ರೀವೇದಾಂತ ದೇಶಿಕರವರ ತಿರುನಕ್ಷತ್ರದಲ್ಲಿ ನಿವೇದನ ಮತ್ತು ವಿನಿಯೋಗಕ್ಕೆ | ರೂ | 400 |

## (6) ಗೋಳಕವು.

ಶ್ರೀ ಶಲ್ವತಿರುನಾರಾಯಣಸ್ವಾಮಿಯವರ ಸನ್ನಿಧಿಯ ಮಹಾದ್ವಾರದ ಬಳಿಯಲ್ಲಿಯೂ, ಶ್ರೀ ತಿರುನಾರಾಯಣನ ಒಳ ಸನ್ನಿಧಿಯಲ್ಲಿಯೂ, ಶ್ರೀ ಸಂಪತ್ಕುಮಾರನ ಒಳ ಸನ್ನಿಧಿಯಲ್ಲಿಯೂ, ಮತ್ತು ಶ್ರೀಯದುಗಿರಿಯಮ್ಮನವರ ಸನ್ನಿಧಿಯಲ್ಲಿಯೂ ಗೋಳಕಗಳಿರುತ್ತವೆ. ಭಕ್ತಾದಿಗಳು ನಾಣ್ಯಗಳನ್ನು ತಮಗೆ ಇಷ್ಟಬಂದಂತೆ ಆಯಾ ಸನ್ನಿಧಿಯ ಗೋಳಕದಲ್ಲಿ ಹಾಕಬಹುದು. ವರುಷಕ್ಕೊಂದಾವರ್ತಿ ಅಂದರೆ ಶ್ರೀ ವೈರಮುಡಿಗೆ ಪೂರ್ವಭಾವಿಯಾಗಿ, ಪೇಷ್ಕಾರವರು ಇವುಗಳನ್ನು ಒಡೆದು, ಪಾರ್ಕಾವಣೆ ಮಾಡಿ, ಪುನಃ ಡಬ್ಬಿಗಳಿಗೆ ಸೀಲ್‌ಮೊಹರ್ ಮಾಡುವರು. ಶ್ರೀಯವರುಗಳಿಗೆ ಸಲ್ಲಿಸತಕ್ಕ ತಿರುವಾಭರಣಗಳನ್ನೂ, ವಸ್ತ್ರಗಳನ್ನೂ ಕ್ರಮವರಿತು ದೇಪಸ್ಥಾನದ ಪೇಷ್ಕಾರ್ರವರ ಆಫೀಸಿನಲ್ಲಿ ಪಾವತಿ ಮಾಡಬಹುದಾಗಿರುತ್ತದೆ

# ೫. ನೆಯ ಅಧ್ಯಾಯವು.



ಮಠಗಳು,

## ಶ್ರೀ ಪರಕಾಲಸ್ವಾಮಿಗಳವರ ಮಠವು.

ಶ್ರೀಮನ್ಮಹಾರಾಜರವರ ಗುರುವರ್ಯರಾದ ಶ್ರೀ ಬ್ರಹ್ಮತಂತ್ರ ಪರಕಾಲಸ್ವಾಮಿಗಳವರ ಮಠವು ಕಲ್ಯಾಣಿ ತೀರದಲ್ಲಿ ಬಹು ಪುರಾತನಕಾಲದಲ್ಲಿ ಕಟ್ಟಲ್ಪಟ್ಟಿದೆ. ಇದರಲ್ಲಿ ಶ್ರೀ ಹಯಗ್ರೀವದೇವರ ಸನ್ನಿಧಿಯೂ ಶ್ರೀನಿವಾಸದೇವರೂ ಮತ್ತು ಲಕ್ಷ್ಮೀನಾರಾಯಣದೇವರೂ ಸುತ್ತಾಲಗುಡಿಯಲ್ಲಿ ಇವೆ. ಈ ಶ್ರೀಮಠಕ್ಕೆ ಪಡಿತರವು ವಿಶೇಷವಾಗಿ ಮೈಸೂರು ಮಠದಿಂದಲೂ, ಸ್ವಲ್ಪಮಟ್ಟಿಗೆ ದೇವಸ್ಥಾನದಿಂದಲೂ ಸಲ್ಲುತ್ತಿರುವುದು.

ಶ್ರೀ ಪರಕಾಲಮಠಕ್ಕೆ ಹಿಂದೆ ಬಹುಕಾಲ ಈ ಮೇಲುಕೋಟೆ ದೇವಸ್ಥಾನಗಳಮೇಲೆ ತಾನಿಕ, ವೈದಿಕ ಭಾಗಗಳೆರಡರಲ್ಲಿಯೂ, ಯಾಜಮಾನಿಕೆ ಇತ್ತು. ಈಚೆಗೆ ಸರ್ಕಾರದವರು ತಾನಿಕ ಭಾಗವನ್ನು ಮಾತ್ರ ತಾವು ಇಟ್ಟುಕೊಂಡು, ವೈದಿಕಭಾಗವನ್ನು ಶ್ರೀಸ್ವಾಮಿಗಳವರಲ್ಲಿ ಬಿಟ್ಟಿರುವರು. ಶ್ರೀಸ್ವಾಮಿಗಳವರು ಈಗ ಮೈಸೂರಲ್ಲಿರುವ ಮುಖ್ಯಮಠದಲ್ಲಿ ದಯಮಾಡಿಸಿದ್ದರೂ ಆಗಾಗ ಶ್ರೀಶನ ಸೇವೆಗಾಗಿ ಇಲ್ಲಿಗೆ ದಯಮಾಡಿಸುವುದುಂಟು. ಮೈಸೂರು ರಾಜಗುರುಗಳು ಮೈಸೂರು ದೇಶದ ಎಲ್ಲಾ ವಿಷ್ಣುದೇವಾಲಯಗಳಲ್ಲಿಯೂ ಅಗ್ರಮರ್ಯಾದೆಯನ್ನು ಸಲ್ಲಿಸುವಂತೆಯೂ, ಅದರಲ್ಲಿಯೂ ಮೇಲುಕೋಟೆ ದೇವಸ್ಥಾನದಲ್ಲಿ ವಿಶೇಷತಃ ಅಗ್ರಮರ್ಯಾದೆ ಸಲ್ಲುವಂತೆಯೂ, ನಿರೂಪಗಳನ್ನು ಕೊಟ್ಟಿರುವರು.

ಶ್ರೀ ಸ್ವಾಮಿಗಳವರು ದಯಮಾಡಿಸದೆ ಇರುವಾಗ ಅವರ ಮರ್ಯಾದೆಗಳನ್ನು ಅದೇ ನಿರೂಪದಂತೆ ಶ್ರೀ ಮಠದಿಂದ ನೇಮಿಸಲ್ಪಟ್ಟ ಗುಮಾಸ್ತರಿಗೆ ಮಾಡುತ್ತಾರೆ. ಸುತ್ತುಗುಡಿಗಳೊಡನೆ ಶ್ರೀನಾರಾಯಣ ದೇವಸ್ಥಾನಕ್ಕೆ ಒಬ್ಬರು ಗುಮಾಸ್ತರು ಶ್ರೀಮಠದಿಂದ ನೇಮಿಸಲ್ಪಟ್ಟಿರುವರು.

ದೇವಸ್ಥಾನದ ಜವಾಹಿರಿಪೆಟ್ಟಿಗೆಗಳಿಗೂ, ಖಜಾನೆಗೂ, ದೇವಸ್ಥಾನದ ಬಾಗಿಲಿಗೂ, ಮುಡಿಪೆಟ್ಟಿಗೆಗಳಿಗೂ, ಸಹಾ ಸರ್ಕಾರಿ ಮುದ್ರೆಯೊಂದಿಗೆ ಶ್ರೀ ಪರಕಾಲಮಠದ ಮುದ್ರೆಗಳೂ, ಆಯಾಯ ಕಾಲದಲ್ಲಿ ಹಾಕಲ್ಪಡುತ್ತವೆ.

ಈ ಮುದ್ರೆಯಲ್ಲಿ ಶ್ರೀಹಯಗ್ರೀವ ಎಂದು ಅಕ್ಷರಕೆತ್ತಿರುವುದು. ಈ ಮಠಮುದ್ರೆಯಾವರನ್ನು ಶ್ರೀಮಠದಿಂದ ನೇಮಿಸಲ್ಪಡುತ್ತದೆ ಇವರಿಗೆ ತಲಬು ದೇವಸ್ಥಾನದಿಂದ ಸಲ್ಲುತ್ತದೆ.

ಶ್ರೀ ವೈರಮುಡಿ ಮತ್ತು ಶ್ರೀ ಕೃಷ್ಣರಾಜಮುಡಿಯ ತೀರ್ಥಸ್ನಾನದ ದಿನಗಳಲ್ಲಿ ಶ್ರೀ ಚಲುವರಾಯ ಸ್ವಾಮಿಯವರು ಈ ಮಠಕ್ಕೆ ಬಿಜಮಾಡಿಸಿ ಸೇವೆಗಳನ್ನು ಕೈಕೊಳ್ಳುವರು. ಪ್ರತಿವರುಷ ಶ್ರೀ ವೈರಮುಡಿ ಮತ್ತು ಶ್ರೀ ಕೃಷ್ಣರಾಜಮುಡಿ ಉತ್ಸವಗಳಲ್ಲಿ ಬಂದಂಥ ಯಾತ್ರಿಕರಿಗೆ ಈ ಮಠದಲ್ಲಿ ವಿಶೇಷತಃ ಆದರಣೆಯಿಂದ ಸಂತರ್ಪಣೆ ಮಾಡುವರು.

## ೨. ಶ್ರೀ ಅಳಗಿಯ ಮಣವಾಳರ ಮಠವು.



ಇದು ಕಲ್ಯಾಣಿಯ ತೀರದಲ್ಲಿರುತ್ತದೆ. ಬ್ರಂಹೋತ್ಸವದ ಗಜೇಂದ್ರಮೋಕ್ಷದ ದಿವಸ ಶ್ರೀಉತ್ಸವರು ಅಮ್ಮನವರಸಹಿತ ಇಲ್ಲಿಗೆ ದಯಮಾಡಿಸುವರು.

## ೩. ಶ್ರೀ ಅಹೋಬಿಲ ಮಠವು.



ಇದು ಕಲ್ಯಾಣಿಯ ತೀರದಲ್ಲಿರುವುದು. ಶ್ರೀ ವೈರಮುಡಿಯ ಉತ್ಸವಕಾಲಗಳಲ್ಲಿ 5–6 ದಿವಸಗಳು ಇಲ್ಲಿಯೂ ಭಕ್ತಾದಿಗಳಿಗೆ ಸಂತರ್ಪಣೆಯು ನಡೆಯುವುದು.

ಶ್ರೀವೈರಮುಡಿಯ ತಿರುನಾಳಿನಲ್ಲಿನ ಪ್ರಹ್ಲಾದ ಪರಿಪಾಲನೆಯ ದಿವಸವೂ, ಮತ್ತು ಆದಿವನ್ ಶರಗೋಪಸ್ವಾಮಿಯವರ ತಿರುನಕ್ಷತ್ರದಲ್ಲಿಯು ಶ್ರೀ ಉತ್ಸವರು ಈ ಮಠಕ್ಕೆ ಬಿಜಮಾಡುವರು.

ಆದಿವಣ್ ಶಠಗೋಪಸ್ವಾಮಿಯವರ ಬೃಂದಾವನ ಮಂಟಪವೂ ಮತ್ತು ತುಲಸೀತೋಟವೂ ಸಹ, ದಳವಾಯಿಯವರ ಕೆರೆಗೆ ಹೋಗುವ ಬಳಿ ಇರುತ್ತವೆ

## ೪. ಕೂರತ್ತಾಳ್ವಾರ್‌ರವರ ಸನ್ನಿಧಿಯು.



ಇದು ಭಾಷ್ಯಕಾರರ ಸನ್ನಿಧಿಯ ಪಕ್ಕದಲ್ಲಿರುತ್ತದೆ. ಮಕರ ಮಾಸ ಹಸ್ತ ನಕ್ಷತ್ರದಲ್ಲಿ ಇವರ ತಿರುನಕ್ಷತ್ರದ ಕಟ್ಟಲೆಯು ನಡೆಯುವುದು

## ೫. ಶ್ರೀ ಪಿಳ್ಳೈ ಲೋಕಾಚಾರ್ಯರ ಸನ್ನಿಧಿಯು

ಇದು ಶ್ರೀ ಯವರ ದೇವಸ್ಥಾನದ ಪ್ರಾಕಾರದಲ್ಲಿರುತ್ತದೆ ಇಲ್ಲಿಗೆ ಶ್ರೀ ಉತ್ಸವರು ಪ್ರತಿ ಶ್ರವಣ ನಕ್ಷತ್ರದಲ್ಲಿಯೂ ಬಿಜಮಾಡಿಸುತ್ತಾರೆ.

## ೬. ಶ್ರೀ ಯತಿರಾಜ ಮಠವು.

ಇದು ದೇವಸ್ಥಾನದ ಗುಡಿಗಳಿಗೆ ಸೇರಿದೆ ಮತ್ತು ಇದು ಪ್ರಕೃತದಲ್ಲಿ ಶ್ರೀಯವರ ದೇವಸ್ಥಾನದ ಎದುರು ಪಾರ್ಶ್ವದಲ್ಲಿನ ಪೂರ್ವದಿಕ್ಕಿನಲ್ಲಿ ಇರುವುದು ಶ್ರೀ ವೈರಮುಡಿಯ ಉತ್ಸವಕಾಲಗಳಲ್ಲಿ ಬರುವ ಭಕ್ತಾದಿಗಳನ್ನು ಮಠದವರು ಸಂಭ್ರಮದಿಂದ ಆದರಿಸುತ್ತಾರೆ ಶ್ರೀ ಸ್ವಾಮಿಗಳು ಇಲ್ಲಿ ವಾಸಮಾಡುವದಿಲ್ಲ ಬೇರೆಸ್ಥಳದಲ್ಲಿ ಇರುವರು ಶ್ರೀ ರಾಮಾನುಜಾಚಾರ್ಯರ ತಿರುನಕ್ಷತ್ರೋತ್ಸವ, ರಥೋತ್ಸವ ದಿನಗಳಲ್ಲಿ ಶ್ರೀ ರಾಮಾನುಜಾಚಾರ್ಯರು ಮಾತ್ರ ಈ ಮಠಕ್ಕೆ ಬಿಜಮಾಡಿಸುವರು

## ೭. ಶ್ರೀ ವಾನಮಾ ಮಲೈ ಮಠವು.

ಇದು ದೇವಸ್ಥಾನದ ದಕ್ಷಿಣಭಾಗದಲ್ಲಿರುತ್ತದೆ. ಶ್ರೀ ವೈರಮುಡಿಯ ಉತ್ಸವಕಾಲಗಳಲ್ಲಿ ಇಲ್ಲಿಯೂ ಸಂತರ್ಪಣೆಯು ನಡೆಯುವುದು

ಶ್ರೀ ವೈರಮುಡಿಯ ದಿವಸವೂ ಮತ್ತು ಶ್ರೀ ಯದುಗಿರಿಯಮ್ಮನವರ ವರ್ಧಂತಿಯ ದಿವಸವೂ (ತಿರುವಾಡಿಪ್ಪೂರಂ), ಶ್ರೀ ಉತ್ಸವರು ಈ ಮಠಕ್ಕೆ ದಯಮಾಡಿಸುತ್ತಾರೆ.

## ೮. ಶ್ರೀ ಮಣವಾಳಮಾಮುನಿಯವರ ಸನ್ನಿಧಿಯು.

ಇದು ಶ್ರೀಯವರ ಸನ್ನಿಧಿಯ ಉತ್ತರಭಾಗದಲ್ಲಿರುತ್ತದೆ. ಇಲ್ಲಿಯೂ ಸಹ ಶ್ರೀ ವೈರಮುಡಿಯ ತಿರುನಾಳಿನಲ್ಲಿ ಸಂತರ್ಪಣೆಯು ನಡೆಯುವುದು

ಇದಲ್ಲದೆ ತಿರುನಕ್ಷತ್ರದಲ್ಲಿಯೂ, ಮತ್ತು ಇತರ ಕಾಲಗಳಲ್ಲಿಯೂ ಸಹ, ಉತ್ಸವಾದಿಗಳು ನಡೆಸಲ್ಪಡುತ್ತವೆ

## ೯. ವಸಂತ ಬಂಗಲೆಯು (ರಾಜಮಂಟಪವು.)

ಇದು ಶ್ರೀಯವರ ದೇವಸ್ಥಾನದ ಉತ್ತರದಿಕ್ಕಿನಲ್ಲಿರುತ್ತದೆ. ಇಲ್ಲಿ ಪಂಚಪರ್ವೋತ್ಸವವು (ದ್ವಾದಶೀ, ಅಮಾವಾಸ್ಯೆ, ಹಸ್ತನಕ್ಷತ್ರ, ಸಂಕ್ರಮಣ, ವಸಂತೋತ್ಸವವು) ನಡೆಯುವದರಿಂದ, ಆದಿವಸವೂ, ಮತ್ತು ಶ್ರೀ ವೈರಮುಡಿಯ ಉತ್ಸವದಲ್ಲಿನ ಅಂಕುರಾರ್ಪಣದಿಂದ ಬ್ರಹ್ಮೋತ್ಸವದ ವರೆಗೆ, ಶ್ರೀ ಉತ್ಸವರು ಇಲ್ಲಿಗೂ ದಯಮಾಡಿಸುವರು. ಇಲ್ಲಿ ಬೆಳೆಯುವ ಪುಷ್ಪಾದಿಗಳು, ಶ್ರೀಯವರ ಸನ್ನಿಧಿಗಳಿಗೆ ಉಪಯೋಗಸಲ್ಪಡುವುವು ಈ ತೋಟವನ್ನು ದೇವಸ್ಥಾನದವರು ನಿಗಾನೋಡುತ್ತಲಿರುವರು.

## ೧೦. ಶ್ರೀನಿಗಮಾಂತಮಹಾದೇಶಿಕರವರ ಸನ್ನಿಧಿಯು.

ಈ ಸನ್ನಿಧಿಯು, ಶ್ರೀ ತಿರುನಾರಾಯಣಸ್ವಾಮಿಯವರ ಸನ್ನಿಧಿಯ ಸಮೀಪದಲ್ಲಿರುತ್ತದೆ. ಈ ಸನ್ನಿಧಿಯಲ್ಲಿ ಅನೇಕ ಭಕ್ತರು ಸೇವೆಗಳನ್ನು

ನಡೆಸುತ್ತಲಿರುವರು. ಶ್ರೀ|| ಮ|| ಶ್ರೀ ವಿಲ್ಲಿತ್ತೂರ್ಪುರ್ ರಂಗಾಚಾರ್ಯರು, ನಾವಿರಾರು ರೂಪಾಯಿ ಮುಟ್ಟಿಸಿ ಈ ಸನ್ನಿಧಿಗೆ ಕೈಸಾಲೆಗಳನ್ನೂ, ಪಾಕ ಶಾಲೆ ಮುಂತಾದುದನ್ನೂ ಕಟ್ಟಿಸಿ ಜೀರ್ಣೋದ್ಧಾರ ಮಾಡಿದರು ಈ ಮಹ ನೀಯರು ದೇವಸ್ಥಾನಕ್ಕೆ ಪಾತ್ರೆಗಳನ್ನು ಒದಗಿಸಿಕೊಟ್ಟಿರುವುದಲ್ಲದೆ, ಆಗಂತುಕರಾಗಿ ಬರುವವರಿಗೆ ತದೀಯಾರಾಧನೆಗೋಸುಗ ಕೆಲವು ಜಮೀನು ಗಳನ್ನು ಕ್ರಯಕ್ಕೆ ಪಡೆದು, ದೇವರ ಹೆಸರಿಗೆ ಖಾತೆ ಮಾಡಿಸಿರುವರು. ಸಂಸ್ಕೃತವನ್ನು ಕಲಿಯತಕ್ಕ ವಿದ್ಯಾರ್ಥಿಗಳಿಗೆ ಊಟ ನಡೆಯುವಂತೆ ತಕ್ಕ ಜಮೀನುಗಳನ್ನು ಒಪ್ಪಿಸಿರುವರು ಮತ್ತು ಪ್ರತಿಮಾಸವಲ್ಲಿಯೂ ಬರುವ ಆರಿದ್ರ, ಹಸ್ತ, ಪೂರ್ವಾಷಾಢ, ಶ್ರವಣ ಈನಾಲ್ಕು ನಕ್ಷತ್ರಗಳಲ್ಲಿ ಸಮಾರಾಧನೆಯು ನಡೆಯುವಂತೆ ಎಂಡೋಮೆಂಟುಇದೆ ಕೈಸಾಲೆಯು ಒಂ ದೊಂದು ಅಂಕಣದಲ್ಲಿಯೂ ಶ್ರೀಚೆಲುವರಾಯಸ್ವಾಮಿಯವರು ಉತ್ಸವ ದಿಂದ ದಯಮಾಡಿಸುವಂತೆ ಅನೇಕ ಭಕ್ತರು ಸೇವಾರ್ಥಕ್ಕಾಗಿ ಪುದುವಟ್ಟು ಕೊಟ್ಟಿರುವರು ಮತ್ತು ಶ್ರೀ ಚಲುವರಾಯಸ್ವಾಮಿಯವರು ಈ ಕೆಳಗೆ ಕಂಡ ಕಾಲಗಳಲ್ಲಿಯೂ ಈ ಸನ್ನಿಧಿಗೆ, ದಯಮಾಡಿಸುತ್ತಾರೆ

(1) ಶ್ರೀ|| ಕೃಷ್ಣರಾಜಮುಡಿಯ ಧಾರಣೆ

(2) ವೈರಮುಡಿ ಮತ್ತು ಕೃಷ್ಣರಾಜಮುಡಿಗಳಲ್ಲಿ ಪ್ರಹ್ಲಾದ ಪರಿ ಪಾಲನೆ

(3) ನವರಾತ್ರಿಯ ಹತ್ತುದಿವಸಗಳೂ ( ಶ್ರೀನಾಚ್ಚಿಯಾರಮ್ಮನವರು ಮಾತ್ರ )

(4) ಕೊಠಾರೋತ್ಸವದ ಹತ್ತು ದಿನಗಳು

(5) ಸಂಕ್ರಾಂತಿಯ ಉತ್ಸವ

(6) ಡೆಲ್ಲಿಯ ಉತ್ಸವ

(7) ಪ್ರತಿಮಾಸದ ಶ್ರವಣನಕ್ಷತ್ರದ ದಿವಸ.

## ೧೧. ವಾಹನದ ಮಂಟಪವು.

ಇದು ಶ್ರೀಯವರ ದೇವಸ್ಥಾನದ ಎದುರಿನಲ್ಲಿದೆ ಇಲ್ಲಿ ಸಮರ ಭೂಪಾಲವಾಹನ, ಹಂಸವಾಹನ, ಚಂದ್ರಮಂಡಲ ವಾಹನ, ಕುದುರೆಯ ವಾಹನ, ಗರುಡ ವಾಹನ, ಮತ್ತು ಸೂರ್ಯಮಂಡಲವಾಹನವೇ ಮುಂತಾಗಿ ಇರುತ್ತವೆ

ದೊಡ್ಡ ಉಯ್ಯಾಲೆಯ ಉತ್ಸವವು ಈ ಮಂಟಪದಲ್ಲಿ ಆಷಾಢ ಶುದ್ಧ ಏಕಾದಶಿಯಿಂದ, ಪೌರ್ಣಮಿಯವರಿಗೆ ನಡೆಯುವುದು

N. B -ಶ್ರೀ ವೈರಮುಡಿಯ ಉತ್ಸವವು ಗ್ರಾಮಪ್ರದಕ್ಷಿಣೆಯಾಗಿ ಬಂದ ನಂತರ, ವಾಹನ ಮಂಟಪದಲ್ಲಿ ಶ್ರೀಯವರನ್ನು ಬಿಜಮಾಡಿಸಿ, ಶ್ರೀ ವೈರಮುಡಿಯನ್ನು ಕಳೆದು, ಶ್ರೀರಾಜಮುಡಿಯನ್ನು ಧರಸಿ ಆಸ್ಥಾನಕ್ಕೆ ಬಿಜಮಾಡಿಸುತ್ತಾರೆ.

## ೧೨. ಗೋಸಾಯಿ ಮಂಟಪವು.

ಇದು ಶ್ರೀ ನೃಸಿಹ್ಮಸ್ವಾಮಿಯವರ ಬೆಟ್ಟಕ್ಕೆ ಹೋಗುವ ದಾರಿಯಲ್ಲಿದೆ. ಇಲ್ಲಿ ಅನೇಕಜನ ಗೋಸಾಯಿಗಳು ನಿತ್ಯದಲ್ಲಿಯೂ, ಮತ್ತು ಶ್ರೀ ವೈರಮುಡಿಯ ಉತ್ಸವದಲ್ಲಿಯೂ ತಮ್ಮ ಸಂಗಡದವರಿಗೂ ಸಮಾರಾಧನೆಯನ್ನು ಮಾಡುತ್ತಾರೆ. ಇದರ ಆಡಳಿತವು ಒಬ್ಬ ಮಹಾಂತರೆಂಬುವರಿಂದ ಜರುಗುತ್ತಲಿದೆ ಇದನ್ನು ಕೆಲವರು ಉತ್ತರಾಜೆ ಮಠವೆಂದು ಕರೆಯುವರು

## ೧೩. ಪಾತ್ರೆಗಳು.

ಶ್ರೀಯವರ ದೇವಸ್ಥಾನದಲ್ಲಿ ಅನೇಕ ಪಾತ್ರೆಗಳು ಇದ್ದರೂ, ಇವು ದೇವಸ್ಥಾನಕ್ಕೋಸುಗವೇ ಉಪಯೋಗಿಸಲ್ಪಡುವುದು . ಭಕ್ತಾದಿಗಳು ಸಮಾರಾಧನೆ ಮಾಡುವದಾದರೆ, ಪಾತ್ರೆಗಳು ಸಿಗುತ್ತವೆ

## ೧೪. ತಿರುವಾಭರಣಗಳು.

ಹಿಂದೆ ಆಳುತ್ತಲಿದ್ದ ಯದುವಂಶದ ರಾಜರು, ಇತರ ರಾಜರು ಮತ್ತು ಭಕ್ತಾದಿಗಳು ಈ ದೇವಸ್ಥಾನಗಳಿಗೆ ವಿಶೇಷವಾಗಿ ತಿರುವಾಭರಣಗಳನ್ನು ಸಮರ್ಪಿಸಿರುವರು. ಅವುಗಳಲ್ಲಿ ಕೆಲವನ್ನು ಮಾತ್ರ ಉದಾಹರಿಸಿದೆ.

(1) ಶ್ರೀ ಕೃಷ್ಣರಾಜ ಒಡೆಯರವರು, ಮತ್ತು ಶ್ರೀ ನರಸರಾಜ ಒಡೆಯರವರು ಸಮರ್ಪಿಸಿರುವ ಬಂಗಾರದ ಬಟ್ಟಲು ಮುಂತಾದವುಗಳು.

(2) ಶ್ರೀ ಕೃಷ್ಣರಾಜ ಒಡೆಯರವರು ಶ್ರೀ ತಿರುನಾರಾಯಣರಿಗೆ ಸಮರ್ಪಿಸಿರುವ ಶ್ರೀಶಠಾರಿಗಳು.

(3) ಶ್ರೀ ಕೃಷ್ಣರಾಜ ಒಡೆಯರವರ ಧರ್ಮಪತ್ನಿಯವರು ಶ್ರೀಲಿಂಗಾಜಮ್ಮಣ್ಣಿಯವರು ಶ್ರೀ ನರಸಿಹ್ಮಸ್ವಾಮಿಯವರಿಗೆ ಕೊಟ್ಟ ಬಂಗಾರದ ಕಿರೀಟವು.

(4) ಇವುಗಳಲ್ಲದೆ ಶ್ರೀಯವರುಗಳ ದೇವಸ್ಥಾನಕ್ಕೆ ಹಿಂದಣ ಮಹಾರಾಜರು ಬಂಗಾರದ ಉಡಿದಾರ, ಪದಕ, ಭುಜಕೀರ್ತಿ, ಮುಂತಾದ ತಿರುವಾಭರಣಗಳನ್ನು ಸಮರ್ಪಿಸಿರುವರು.

ಅನೇಕ ಭಕ್ತಾದಿಗಳು ಶ್ರೀಯವರಿಗೆ ಮಾವಿನಕಾಯಿಸರ, ವಜ್ರದ ಓಲೆ, ಸ್ವರ್ಣಕಿರೀಟ, ಜಡೆಬಂಗಾರ, ಮೂಗುತಿ, ಕಂಠೀಸರ, ಪದಕ, ಮುಂತಾದವುಗಳನ್ನೂ ಒಪ್ಪಿಸಿರುವರು.

ರಾಜಮುಡಿ, ಕೃಷ್ಣರಾಜಮುಡಿ ಎಂಬ ಬಹಳ ಅಮೂಲ್ಯಗಳಾದ ಕಿರೀಟಗಳು ನಮ್ಮನ್ನು ಆಳುವ ಮಹಾಪ್ರಭುಗಳ ವಂಶೀಕರಿಂದ ಸಮರ್ಪಿಸಲ್ಪಟ್ಟು, ಅವನ್ನು ಈಗಲೂ ಉತ್ಸವಕಾಲಗಳಲ್ಲಿ ಶ್ರೀಯವರಿಗೆ ಧಾರಣೆ ಮಾಡಿಸುವರು. ಇವುಗಳನ್ನು ಪರಿಶೀಲಿಸಿ ನೋಡಿದರೆ ನಮ್ಮ ರಾಜಮನೆತನದವರು ಶ್ರೀಯವರುಗಳಲ್ಲಿ ಎಷ್ಟರಮಟ್ಟಿಗೆ ಭಕ್ತಿಯುತರಾಗಿರುವರೆಂಬುವದು ಗೊತ್ತಾಗುವುದು.

ಇದೂ ಅಲ್ಲದೆ ವೈರಮುಡಿ ( ವಜ್ರದ ಕಿರೀಟವು ) ಎಂಬ ಕಿರೀಟವನ್ನು ಬ್ರಹ್ಮೋತ್ಸವದ 4 ನೆಯ ತಿರುನಾಳಿನಲ್ಲಿ ಶ್ರೀಶಲ್ವಪಿಳ್ಳೈಯವರಿಗೆ ಧರಿಸುವರು. ಮೇಲ್ಕಂಡ ಕಿರೀಟಗಳನ್ನು ಶ್ರೀಮನ್ ಮಹಾರಾಜಾ ಸಾಹೇಬ್ ಬಹದ್ದೂರ್ರವರ ಅರಮನೆಯಲ್ಲಿ ಭದ್ರಪಡಿಸಿ ಇಟ್ಟಿದ್ದು, ಆಯಾಯ ಉತ್ಸವದ ವೇಳೆ ತಕ್ಕ ಪಹರೆಯವರ ಮೂಲಕ ಕಳುಹಿಸಿಕೊಟ್ಟು, ಉತ್ಸವಗಳಾದ ನಂತರ ಅರಮನೆಗೆ ಬರಮಾಡಿಕೊಳ್ಳುತ್ತಿರುವರು. ಮುಡಿಗಳ ಬಾಬತು ನಗಗಳ ತಪಸೀಲನ್ನು ಯೀಕೆಳಗೆ ವಿವರಿಸಿದೆ.

(1) ವೈರಮುಡಿ ಪೆಟ್ಟಿಗೆಯಲ್ಲಿ ವೈರಮುಡಿ.

(2) ಕೃಷ್ಣರಾಜಮುಡಿಯ ಪೆಟ್ಟಿಗೆಯಲ್ಲಿ ವಜ್ರದಿಂದ ಮಾಡಲ್ಪಟ್ಟ ಕೃಷ್ಣರಾಜಮುಡಿ 1; ಗಂಡಬೇರುಂಡದ ಪದಕಗಳು 2, ಅಭಯ ಹಸ್ತ 3; ಕೋರಂಬ ಮತ್ತು ಕರ್ಣಪವಕಗಳು.

(3) ರಾಜಮುಡಿಯ ಪೆಟ್ಟಿಗೆಯಲ್ಲಿರುವುದು

ಕೆಂಪಿನಿಂದ ಮಾಡಲ್ಪಟ್ಟ ರಾಜಮುಡಿ 1; ಗಂಡಬೇರುಂಡದ ಪದಕ 1; ವಡ್ಯಾಣ ; ಅಭಯಹಸ್ತಗಳು 4; ಗದಾಹಸ್ತ 2; ಕರ್ಣಪತ್ರ 2; ಪದ್ಮಪೀಠ ; ಮತ್ತು ಜಡೆಬಂಗಾರ 1. 13.

ಇತರ ಜವಾಹಿರಿಗಳು ಶ್ರೀರಂಗಪಟ್ಟಣದ ತಾಲ್ಲೂಕು ಖಜಾನೆಯಲ್ಲಿ ಇರುವವು. ಉತ್ಸವಕಾಲಗಳಲ್ಲಿ ಬಿದರಿಕೆಯಿಂದ ತರಸಿಕೊಂಡು, ಉತ್ಸವಾನಂತರ ವಾಪಸುಮಾಡುವರು

## ೧೫. ಆಚಾರ್ಯಪುರುಷರಗಳು.

ಶ್ರೀ ಭಾಷ್ಯಕಾರರಿಂದ ಸ್ಥಾಪಿಸಲ್ಪಟ್ಟ 74 ಸಿಹ್ಮಾಸನಾಧಿಪತಿಗಳಲ್ಲಿ ಕೆಲಕೆಲವರು ಅವರವರ ವಂಶಪರಂಪರೆಯಿಂದ, ಶ್ರೀಶನ ಕೈಂಕರ್ಯಪರರಾಗಿದ್ದರು. ಇವರುಗಳ ಪೈಕಿ ಸ್ಥಳಸಂಕೋಚದಿಂದ ಮುಖ್ಯವಾದ ಕೆಲವರನ್ನು ಈ ಕೆಳಗೆ ನಮೂದಿಸಿದೆ.

| | |
|---|---|
| ಶ್ರೀ ಪರಕಾಲಸ್ವಾಮಿಗಳು | ಪರವಸ್ತು |
| ಶ್ರೀರಂಗ ಕಂದಾಡಿ ಅಣ್ಣನ್ | ಶ್ರೀತಿರುಪತಿ ರಾಮಾನುಜ ಜೀಯರ್ |
| ಪ್ರತಿವಾದಿ ಭಯಂಕರರ್ | ,, ಯತಿರಾಜಸ್ವಾಮಿಗಳು |
| ತೋಳಪ್ಪಾಚಾರ್ಯರು | ,, ಅಹೋಬಿಲಸ್ವಾಮಿಗಳು |
| ಆನಂದಾಳ್ವಾರ್ | ,, ತೋತಾದ್ರಿಸ್ವಾಮಿಗಳು |
| ಕಂದಾಳಡೈ | ಮುಂತಾದವರು. |
| ವೀರವಲ್ಲಿ | |
| ಧರ್ಮಪುರಿ | |
| ಸೋಮಯಾಜಿಯಾಂಡಾನ್ | |

## ೧೬. ಶ್ರೀ ಮಠಾಧಿ ಪತಿಗಳು.

ಮೇಲೆ ಸಮೂದಿಸಿರುವುದಲ್ಲದೆ ಇತರ ಸಂಪ್ರದಾಯದ ಯತಿಗಳು ಆಗಾಗ ಶ್ರೀಯವರ ದರ್ಶನಾರ್ಥವಾಗಿ ಈ ಕ್ಷೇತ್ರಕ್ಕೆ ಬರುವರು. ಇವರು ದಯಮಾಡಿದ ಕಾಲದಲ್ಲಿ ದೇವಸ್ಥಾನದವರು ಬಹಳ ಮರ್ಯಾದೆಯಿಂದ ಕರೆದುಕೊಂಡು ಹೋಗಿ, ಸೇವೆಗಳನ್ನು ಮಾಡಿಸಿ ಕಳುಹಿಸುವರು.

# ಆರನೆಯ ಅಧ್ಯಾಯವು.

## 1. ಗ್ರಾಮವಸತಿಯು ಮತ್ತು ಮ್ಯುನಿಸಿಪಾಲಿಟಿಯು.

ಈ ಗ್ರಾಮವು ಒಂದು ಹೋಬಳಿಯ ಹೆಡ್ಕ್ವಾರ್ಟರಾಗಿರುತ್ತದೆ. ಇದು 1-7-1918 ರಲ್ಲಿ ಮೈನರ್ ಮ್ಯುನಿಸಿಪಾಲಿಟಿಯಾಗಿ ಮಾಡಲ್ಪಟ್ಟಿರುತ್ತದೆ. ಇಲ್ಲಿ 2738 ಪ್ರಜಾಸಂಖ್ಯೆಯೂ, 918 ಮನೆಗಳೂ, 2 ಮಿಲ್ಲುಗಳೂ; 528 ಮಗ್ಗಗಳೂ; 936 ಜಾನುವಾರಗಳೂ; ಇರುತ್ತವೆ. ಶ್ರೀರಂಗಪಟ್ಟಣದ ಅಮಲ್ದಾರರವರು ಪ್ರೆಸಿಡೆಂಟರವರಾಗಿಯೂ, ಮೆಂಬರುಗಳ ಪೈಕಿ ಒಬ್ಬರು ವೈಸ್‌ಪ್ರೆಸಿಡೆಂಟರಾಗಿಯೂ ನೇಮಿಸಲ್ಪಟ್ಟು, ಇತರ ಮೆಂಬರುಗಳ ಸಹಾಯದಿಂದ ಮ್ಯುನಿಸಿಪಾಲಿಟಿಯ ಕೆಲಸ ಕಾರ್ಯಗಳನ್ನು ನೆರವೇರಿಸುತ್ತಲಿರುವರು. ಇದು 1½ ಚದರ ಮೈಲಿಗಳ ಪ್ರದೇಶವುಳ್ಳ

ವಾಗಿ, ಎತ್ತರವಾದ ಪ್ರದೇಶದಲ್ಲಿ ಜನಭರಿತವಾಗಿದೆ. ಬಿಸಿಲುಕಾಲದಲ್ಲಿ ಇಲ್ಲಿಯ ಹವಾವು ನಂದಿಯಬೆಟ್ಟದ ಹವಾಕ್ಕೆ ಸಮನಾಗಿರುವುದೆಂದು ಹೇಳುವರು

ಮ್ಯುನಿಸಿಪಾಲಿಟಿಯ ಆದಾಯ ವೆಚ್ಚಗಳು ಅಷ್ಟು ಸಮರ್ಪಕವಾಗಿಲ್ಲದಿದ್ದರೂ, ಈ ಗ್ರಾಮದ ಶಾಕೀಜಾ ವಿಷಯದಲ್ಲಿ ಹೆಚ್ಚಾಗಿ ಗಮನ ಕೊಡಬೇಕೆಂದು ಜನಗಳು ಅಭಿಪ್ರಾಯ ಪಡುವರು.

## 2. (a) ಪೋಲೀಸ್ ಸ್ಟೇಷನ್.

ಗ್ರಾಮದ ಹೊರಭಾಗದಲ್ಲಿ ಒಂದು ಪೋಲೀಸ್ ಸ್ಟೇಷನ್ ಇರುತ್ತದೆ. ಜಾತ್ರೆಗಳ ಕಾಲದಲ್ಲಿ ಹೆಚ್ಚಿಗೆ ಸಿಬ್ಬಂದಿಗಳು ನೇಮಿಸಲ್ಪಟ್ಟು, ಜನಸ್ತೋಮವಾದಾಗ, ಯಾವತೊಂದರೆಗಳಿಗೂ ಅವಕಾಶವಿಲ್ಲದಂತೆ ನಿಗಾನೋಡುವರು.

## (b) ಪೋಸ್ಟಾಫೀಸು.

ಟೌನ್ ಒಳಗೆ ಒಂದು ಬ್ರಾಂಚ್ ಪೋಸ್ಟಾಫೀಸು ಇರುತ್ತದೆ.

## 3. ಸ್ಕೂಲುಗಳು.

ಈ ಊರಿನಲ್ಲಿ ಒಂದು ಮಿಡಲ್‌ಸ್ಕೂಲ್, ಒಂದು ಗರ್ಲ್ಸ್‌ಸ್ಕೂಲ್ ಮತ್ತು ಒಂದು ಪ್ರೈಮರಿಸ್ಕೂಲ್ ಸಹ ಇರುತ್ತದೆ.

## 4. ಕಾಲೇಜು.

ಊರಿನೊಳಗೆ ಸಂಸ್ಕೃತ ಕಾಲೇಜು ಇರುವುದು. ಇದು 1878ರಲ್ಲಿ ಸ್ಥಾಪಿತವಾಯಿತು. ಪ್ರತಿವರ್ಷವೂ ನಡೆಯುವ ವೇದಾಂತಾದಿ ವಿದ್ವತ್ಪರೀಕ್ಷೆಯಲ್ಲಿ ಅನೇಕ ವಿದ್ಯಾರ್ಥಿಗಳು ತೇರ್ಗಡೆಯಂಹೊಂದಿ, ರಾಜಾಸ್ಥಾನದಲ್ಲಿ ಬಹುಮಾನವನ್ನು ಹೊಂದುತ್ತಲಿರುವರು.

## 5 (a) ಆಸ್ಪತ್ರೆಯು.

ಇಲ್ಲಿ ಲೋಕಲ್‌ಫಂಡ್ ಆಸ್ಪತ್ರೆಯು ಇರುತ್ತದೆ. ಇದೂ ಅಲ್ಲದೆ ಅನೇಕರು ಆಯುರ್ವೇದ ವಿದ್ಯೆಯನ್ನು ಕಲಿತು ಚಿಕಿತ್ಸೆಮಾಡಲು ಬಲ್ಲವರಾಗಿರುವರು.

## (b) ಫಾರೆಸ್ಟು ರೇಂಜು ಆಫೀಸು.

ಇಲ್ಲಿ ಒಂದು ಫಾರಸ್ಟು ಹೆಡ್‌ಕ್ವಾರ್ಟರ್ ಆಫೀಸು ಇರುತ್ತದೆ ಈ ರೇಂಜಿಗೆ ನಾಗಮಂಗಲ, ಮಂಡ್ಯ, ಶ್ರೀರಂಗಪಟ್ಟಣ, ಮಳವಳ್ಳಿ, ಮತ್ತು ಕೃಷ್ಣರಾಜಪೇಟೆ ತಾಲ್ಲೂಕುಗಳೂ ಸೇರಿರುತ್ತವೆ

## 6 ಭೋಜನ ಶಾಲೆಯು.

ನಿತ್ಯಕಟ್ಟಲೆಯಲ್ಲಿ ಕೆಲವರಿಗೆ ಮಾತ್ರ ಶ್ರೀ ಜೀಯರ್ ಸನ್ನಿಧಿಯಲ್ಲಿಯೂ, ಶ್ರೀ ದೇಶಿಕರವರ ಸನ್ನಿಧಿಯಲ್ಲಿಯೂ, ಮತ್ತು ಶ್ರೀ ನಂಜೀಯರ್ ಸನ್ನಿಧಿಯಲ್ಲಿಯೂ ಭೋಜನಕ್ಕೆ ಅನುಕೂಲವಿರುವುದು

ಜಾತ್ರೆ ಕಾಲದಲ್ಲಿ ವೈಶ್ಯ ಮಹಾಜನಗಳಿಗೆ ಮ। ನಾಮಾ ಗೋವಿಂದ ಶೆಟ್ಟರವರೇ ಮುಂತಾದವರು ಊಟ ಉಪಚಾರಗಳಗೆ ಏರ್ಪಡಿಸಿರುತ್ತಾರೆ

ಒಕ್ಕಲಿಗ ಮಹಾಜನಗಳಿಗೂ ಬ್ರಹ್ಮೋತ್ಸವಕಾಲದಲ್ಲಿ ಸಂತರ್ಪಣೆ ಮಾಡುವರು.

ಒಕ್ಕಲಿಗರ ಹಾಸ್ಟಲಿನಲ್ಲಿ ಪ್ರತಿನಿತ್ಯವೂ, ಒಕ್ಕಲಿಗ ವಿಧ್ಯಾರ್ಥಿಗಳಿಗೆ ಊಟಕ್ಕೆ ಅನುಕೂಲಪಡಿಸುವರು.

ನೇಯಿಗೆಯ ಮಹಾಜನಗಳೂ ಜಾತ್ರೆಯ ಕಾಲದಲ್ಲಿ ಸದಾಭತ್ಯವೆಂಬ ಸ್ಥಳದಲ್ಲಿ ಸಮಾರಾಧನೆಯನ್ನು ಮಾಡುವರು

## 7 ಹೋಟೆಲ್‌ಗಳು.

ಇಲ್ಲಿ ಎರಡು ಬ್ರಾಹ್ಮಣರ ಫಲಹಾರ ಮತ್ತು ಭೋಜನಶಾಲೆಗಳೂ, ಮತ್ತು ಬಣಜಿಗರ ಹೋಟಲ್‌ಗಳು ಸಹ ಇರುತ್ತವೆ. ಜಾತ್ರೆಯ ಕಾಲಗಳಲ್ಲಿ ಅನೇಕ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಹೋಟಲ್‌ಗಳು ಇಡಲ್ಪಡುತ್ತವೆ

## 8. ಇಂಡಸ್ಟ್ರಿಯಲ್ ಸ್ಕೂಲ್.

ಇಲ್ಲಿ ಗ್ರಾಂಟ್-ಇನ್-ಏಡ್ ಇಂಡಸ್ಟ್ರಿಯಲ್‌ಸ್ಕೂಲ್ ಇರುತ್ತದೆ. ಇದು 1901 ರಲ್ಲಿ ಸ್ಥಾಪಿತವಾಗಿ ಮ॥ ಯಂ ಜಿ. ಶಾಮೈಯ್ಯಂಗಾರ್ಯರವರ ಮೇಲ್ನೋಟದಲ್ಲಿ ಅಭಿವೃದ್ಧಿ ಹೊಂದುತ್ತಲಿದೆ.

## 9. ಮಿಲ್ಲುಗಳು

ಇಲ್ಲಿ ಎರಡು ರೈಸ್‌ಮಿಲ್ಲುಗಳು ಇರುತ್ತವೆ ಇವುಗಳಲ್ಲಿ ಶೀಗೇಕಾಯಿ ಪುಡಿ, ಅಕ್ಕಿಯಹಿಟ್ಟು ಮುಂತಾದುವುಗಳು ತಯಾರಾಗುವವು

## 10. (a) ಸೊಸೈಟಿಗಳು.

ಇಲ್ಲಿ ನೇಯಿಗೆಯುವರ ಕೋ-ಆಪರೇಟೀವ್ ಸೊಸೈಟಿಯೂ ಮತ್ತು ಅಗ್ರಿಕಲ್ ಚರಲ್ ಕೋ॥ ಸೊಸೈಟಿಯೂ ಇರುತ್ತವೆ. ಈ ಸೊಸೈಟಿಗಳು ಚೆನ್ನಾಗಿ ಅಭಿವೃದ್ಧಿಯಲ್ಲಿ ಇರುತ್ತವೆ. ನೇಯಿಗೆಯುವರ ಸೊಸೈಟಿಯಲ್ಲಿ ಉತ್ಕೃಷ್ಟವಾದ ಪಂಚೆ, ಶೀರೆ ಮುಂತಾದವುಗಳು ಬಿಕರಿಗೆ ಸಿಗುವುವು

## (b) ಲೈಬ್ರೆರಿಗಳು:—

ಇಲ್ಲಿ ದೇವಸ್ಥಾನದ ಲೈಬ್ರೆರಿಯೂ, ಸಂಸ್ಕೃತ ಕಾಲೇಜು ಲೈಬ್ರೆರಿಯೂ ಮತ್ತು ಯದುಗಿರಿ ಸದಾನಂದ ವರ್ಧಿನೀಸಭಾ ಲೈಬ್ರೆರಿಯೂ ಇರುತ್ತವೆ. ಕಾಲೇಜು ಲೈಬ್ರೆರಿಯಲ್ಲಿ ಪುರಾತನವಾದ ಸದ್ಗ್ರಂಥಗಳು ದೊರೆಯುತ್ತವೆ.

## 11. ಸತ್ರಗಳು.

ಶ್ರೀಯವರ ದೇವಸ್ಥಾನದ ಉತ್ತರದಿಕ್ಕಿನಲ್ಲಿ ಶ್ರೀ ಅಮೃತವಲ್ಲಿ ತಾಯಾರಮ್ಮನವರ ವೈಶ್ಯಸತ್ರವಿರುತ್ತದೆ ಇದರಲ್ಲಿ ವೈಶ್ಯಮಹಾಜನಗಳು ತಂಗಬಹುದಾಗಿದೆ

ರಾಮಾನುಜ ತೋಟವೆಂಬ ವಸತಿಯು ಗೌರೀಗುಡಿಯ ಬೀದಿಯಲ್ಲಿದೆ. ಜಾತ್ರೆಕಾಲದಲ್ಲಿ ಭಾಗವತರವರು ಇಳಿದುಕೊಳ್ಳುವರು

ಸದಾಭತ್ಯವೆಂಬ ಸತ್ರವು ನೇಯಿಗೆಯುವರ ಕೇರಿಯಲ್ಲಿದೆ ಇಲ್ಲಿ ಬಂದವರಿಗೆ ಸ್ವಯಂಪಾಕವನ್ನು ಕೊಡುವರು.

ಬೊಂಬಾಯಿನಲ್ಲಿರುವ ಮ ಶಿವದಾಸ್ ಎಂಬವರು ಇಲ್ಲಿರುವ ವಸಂತೋತ್ಸವ ಉದ್ಯಾನವನದಲ್ಲಿ ಒಂದು ಧರ್ಮಸತ್ರವನ್ನು ಕಟ್ಟಿಸುವುದಾಗಿ ಉದ್ದೇಶಿಸಿರುವಂತೆ ತಿಳಿಯಬರುತ್ತದೆ ಈ ಮಹನೀಯರು ಜಾಗ್ರತೆಯಾಗಿ ಕಟ್ಟಡವನ್ನು ಕಟ್ಟಿಸಿದುದಲ್ಲಿ ದೂರದೇಶದಿಂದ ಆಗಂತುಕರಾಗಿ ಬರುವ ಯಾತ್ರಾರ್ಥಿಗಳಿಗೆ ಅನುಕೂಲವಾಗುವುದೆಂದು ಹೇಳುವರು.

ಷರಾ:—ಮತ್ಯಾವ ವಸತಿಯು ಇಲ್ಲದಿದ್ದರೂ, ಯಾತ್ರಾರ್ಥಿಗಳು ತಂಗಲು ಬಾಡಿಗೆಗೆ ಮನೆಗಳು ದೊರಕುತ್ತವೆ.

## 12 ಶ್ರೀ ಯದುಗಿರಿ ಸದಾನಂದ ವರ್ಧಿನೀ ಸಭೆಯು.

ಈ ಸಭೆಯು 1891 ರಲ್ಲಿ ಸ್ಥಾಪಿತವಾಯಿತು. ಗ್ರಾಮಾಭಿವೃದ್ಧಿ, ವಿದ್ಯಾಭಿವೃದ್ಧಿ, ಕಲಾಭಿವೃದ್ಧಿ, ದೇವಸ್ಥಾನಗಳ ಜೀರ್ಣೋದ್ಧಾರ ಮುಂತಾದ ಸತ್ಕಾರ್ಯಗಳಿಗೆ ಹಣವನ್ನು ಉಪಯೋಗಿಸಿ, ಜನಗಳು ಏಳಿಗೆಗೆ ಬರುವಂತೆ ಮಾಡತಕ್ಕುದೇ, ಇದರ ಮುಖ್ಯ ಉದ್ದೇಶ್ಯವಾಗಿದೆ ಈ ಮಹ ತ್ಕಾರ್ಯಕ್ಕೆ ಗ್ರಾಮದಲ್ಲಿಯ ಮುಖಂಡರ ಪೈಕಿ, ಒಬ್ಬರಿಂದ ಶ್ರೀ ಮಾ॥ರಾ॥ ಯಂ. ಜಿ. ಶ್ಯಾಮೈಯ್ಯಂಗಾರ್ಯರು, ಹೊಸಹೊಳಲು ಸಾಹುಕಾರ್ ವೆಂಕಟ ಶೆಟ್ರವರು ಮುಂತಾಗಿ ಬಹಳ ಶ್ರಮಪಟ್ಟು ರಿಯಾಯತಿ ದರದಲ್ಲಿ ತರಿ ಜಮಾನುಗಳನ್ನು ಪಡೆಯಲು ಘನವನ್ನು ಹೊಂದಿದ ನಮ್ಮ ಸರ್ಕಾರದ ವರಿಂದ 2-8-29 ರ ಮಂಕಿಂ 2861-4 L N 556-26-3 ನೇ ನಂಬರ್ ಮಂಜೂರಾತಿಯ ಹುಕ್ಕುಂ ಪಡೆದಿರುವರು. ಅದರಂತೆ 30,00 ಎಕರೆ ತರೀ ಜಮೀನುಗಳನ್ನು, ಮೇಲ್ಕಂಡ ಸತ್ಕಾರ್ಯಕ್ಕೆ ಉಪಯೋಗಿಸಲು ಅನುಕೂಲಿಸುವಂತೆ, ಪಡೆಯಲು ಮಹನೀಯರುಗಳ ಸ್ವಹಸ್ತ, ಪರಹಸ್ತ ಗಳ ಸಹಾಯವನ್ನು ಬೇಡಿ ಹಣವನ್ನು ಒದಗಿಸಲು ಏರ್ಪಾಡಿಟ್ಟು, ಇದು ವರೆಗೆ 50000 ರೂಪಾಯಿಗಳು ವಸೂಲಾಗಿ ಸರ್ಕಾರದವರಿಂದ 100 ಎಕರೆ ಜಮಿನುಗಳನ್ನು ಪಡೆದಿರುವಂತೆ ತಿಳಿಯಬರುತ್ತದೆ. ಇದು ಶ್ಲಾಘನೀ ಯವಾದ ಕೆಲಸವಾದುದರಿಂದ, ಈ ಮಹತ್ಕಾರ್ಯಕ್ಕೆ ಪ್ರಜಾಸಾಮಾನ್ಯ ದವರು ಉದಾರಬುದ್ಧಿಯಿಂದ ಸಹಾಯಮಾಡಿ ಕೀರ್ತಿಯನ್ನು ಪಡೆಯಲು ಅವಕಾಶವಿರುತ್ತದೆ.

## 13 ನೀರಿನ ವಸತಿಯು.

ದಳವಾಯಿಯವರ ಕೆರೆಎಂಬುದು ಟೌನ್ನಿಗೆ ಪಶ್ಚಿಮದಿಕ್ಕಿನಲ್ಲಿ ಸುಮಾರು ½ ಮೈಲಿ ದೂರದಲ್ಲಿದೆ ಇದು ಸ್ನಾನಕ್ಕೆಮಾತ್ರ ಉಪಯೋಗವಾಗಿದೆ. ಇವರಂತೆ 40 ಕೊಳಗಳು ಯದುಗಿರಿಯ ಮೇಲೂ, ಕೆಳಭಾಗದಲ್ಲಿಯೂ ಇರುವುವು

ಚಲುವೆ ಅರಸಿನವರ ಕೊಳವೆಂಬುದೂ, ಕಾಟೇರಿ ಎಂಬ ಕೋಳವೂ ಪಾನಕ್ಕೆ ಯೋಗ್ಯವಾಗಿದೆ ಇವುಗಳ ನೀರನ್ನೇ ಗ್ರಾಮಸ್ಥರು ಉಪಯೋಗಿಸುವರು. ಸಾಧಾರಣವಾಗಿ ಪ್ರತಿ ಮನೆಯಲ್ಲಿಯೂ ಸೇದುವ ನೀರಿನ ಬಾವಿಯು ಇರುವುದು.

## 14 ಬಂಗಲೆಗಳು.

ಈ ಗ್ರಾಮಕ್ಕೆ ಉತ್ತರದಿಕ್ಕಿನಲ್ಲಿ ಸುಮಾರು ೧ ಮೈಲಿಯ ದೂರದಲ್ಲಿ ಒಂದು ಟ್ರಾವಲರ್ಸ್ ಬಂಗ್ಲಾ ವಿರುತ್ತದೆ. ಇದು ಎತ್ತರವಾದಮೈದಾನದಲ್ಲಿ ಕಟ್ಟಲ್ಪಟ್ಟಿರುತ್ತದೆ ಇಲ್ಲಿ ಇಳಿಯುತಕ್ಕವರು ಕಾನೂನು ಅನುಸರಿಸಿ ರುಸುಂ ಕೊಡಬೇಕಾಗಿರುತ್ತದೆ.

ಷರಾ. ಮುಖ್ಯವಾಗಿ ಮೈರಮುಡಿ ಜಾತ್ರೆಯ ಕಾಲದಲ್ಲಿ ಬರುವ ಯಾತ್ರಾರ್ಥಿಗಳಿಗೆ ಒಂದು ಮುಸಾಫರ್‌ಖಾನೆಯನ್ನು ಕಟ್ಟಿ ಅಲ್ಲಿ ವಿಶ್ರಮಸ್ಥಾನವನ್ನೂ ಭೋಜನ ವಸತಿಯನ್ನೂ ಕಲ್ಪಿಸಿದರೆ ಮಹೋಪಕಾರವನ್ನು ಮಾಡಿದಂತಾಗುವುದೆಂದು ಹೇಳುವರು.

## 15. ಸ್ಯಾನಿಟೇಷನ್ ಯಾನೆ ಗ್ರಾಮಶೋಧನವು.

ಮ್ಯುನಿಸಿಪಾಲಿಟಿಯಲ್ಲಿ 8 ಝಾಡಮಾಲಿಗಳು ಇರುವರು. ಜಾತ್ರೆಯ ಕಾಲದಲ್ಲಿ ಒಬ್ಬ ಸ್ಯಾನಿಟರಿ ಇನ್ಸ್ಪೆಕ್ಟರನ್ನೂ ಮತ್ತು ಕೆಲವು ಹೆಚ್ಚಿಗೆ ಸಿಬ್ಬಂದಿಯನ್ನು ಇಟ್ಟುಕೊಂಡು, ಬಹಳ ಜಾಗರೂಕತೆಯಿಂದ ಹವ ಕೆಡದಂತೆ ದಿನಚರಿ ಗ್ರಾಮ ಶೋಧನಾಕ್ಕೆ ಏರ್ಪಡಿಸುವರು.

ಈ ಗ್ರಾಮದಲ್ಲಿ ಒಬ್ಬ ದೇಶೀ ಪಂಡಿತನೂ, ಮತ್ತು ಒಬ್ಬ ಸೂಲಗಿತ್ತಿಯೂ ಇದ್ದು, ಶ್ರದ್ಧೆಯಿಂದ ಕೆಲಸಮಾಡುತ್ತಲಿರುವರು.

## 16 ಸಂತೆ ಮತ್ತು ಟೋಲ್‌ಗೇಟ್.

ಈ ಊರಿನಲ್ಲಿ ಪ್ರತಿ ಮಂಗಳವಾರವೂ ಸಂತೆಯು ನಡೆಯುವುದು. ಸಂತೆಯಲ್ಲಿ ಆಹಾರ ಪದಾರ್ಥಗಳು ಸಿಗುತ್ತವೆ ತಲೆ ಹೊರೆಗೆ 0—0—3; ಹೇರಿಗೆ 0—0—6, ನುತೆ ಸುಂಕವನ್ನು ಕೊಡಬೇಕಾಗಿದೆ.

ಟೋಲ್‌ಗೇಟಿನ ಬಳಿ ಪ್ರತಿ ಖಾಲಿಗಾಡಿಗೆ 0—1—0; ಭರ್ತಿಗಾಡಿಗೆ 0—2—0; ಬಸ್ಸಿಗೆ 0—4—0, ಮತ್ತು ಕಾರಿಗೆ 0—4—0 ಆಣೆಯಂತೆ ಸುಂಕವನ್ನು ಕೊಡಬೇಕಾಗಿರುತ್ತದೆ.

## 17. ವಿದ್ಯುಚ್ಛಕ್ತಿಯ ದೀಪಗಳು

ಹುಲಿಕೆರೆ ಲೈಟ್‌ಹೌಸಿನಿಂದ ಈ ಗ್ರಾಮಕ್ಕೆ ವಿದ್ಯುಚ್ಛಕ್ತಿಯ ದೀಪಗಳನ್ನು ತಂದಿರುತ್ತಾರೆ. ಮೇಲುಕೋಟೆಯ ಪೂರ್ವದಿಕ್ಕಿನಲ್ಲಿ (ಮೂಡಲ ಬಾಗಿಲು) ಒಂದು ಲೈಟ್‌ಹೌಸನ್ನು ಕಟ್ಟಿಸಿ, ಅದರಿಂದ ಮ್ಯುನಿಸಿಪಾಲಿಟಿಗೂ, ಮನೆಗಳಿಗೂ, ಮತ್ತು ದೇವಸ್ಥಾನಗಳಿಗೂ ಬೆಳಕನ್ನು ಕೊಡುತ್ತಲಿರುವರು ತಿರುಪತಿಯಲ್ಲಿ ಇರುವಂತೆ ಶ್ರೀ ನೃಸಿಹ್ಮಸ್ವಾಮಿಯವರ ಬೆಟ್ಟದ ಮೆಟ್ಟಲುಗಳ ಬಳಿಯಲ್ಲಿಯೂ, ಕೆಲವ ತೀರ್ಥಗಳ ಬಳಿಯಲ್ಲಿಯೂ, ದೇವಸ್ಥಾನದವರು ವಿದ್ಯುಚ್ಛಕ್ತಿಯ ದೀಪಗಳನ್ನು ಇಡಿಸಿದರೆ, ರಾತ್ರಿವೇಳೆ ಬರತಕ್ಕ ಯಾತ್ರಿಕರಿಗೆ ಅನುಕೂಲವಾಗುತ್ತೆಂದು ಜನಗಳು ಹೇಳುತ್ತಲಿದ್ದಾರೆ

## 18 ರಸ್ತೆಗಳು

ಮೇಲುಕೋಟೆಗೆ ಬರಲು, ಕೃಷ್ಣರಾಜಪೇಟೆಯ ಕಡೆಯಿಂದಲೂ, ಫ್ರೆಂಚ್‌ರಾಕ್ಸ್ (ಹಿರೋಡೆ) ಕಡೆಯಿಂದಲೂ, ಭಾಟಾಮಾರ್ಗಗಳೂ ಇರುತ್ತವೆ. ಜಕ್ಕನಹಳ್ಳಿ ತಿರುವಿನಿಂದ ಮೇಲುಕೋಟೆಗೆ ಹೋಗುವ 3½ ಮೈಲಿ ದೂರದಷ್ಟು ರಸ್ತೆಯು ಇದೆ. ಕಾಲುನಡೆಯಿಂದ ಹೋಗಿಬರಲು ಅನೇಕ ಸೀಳು ದಾರಿಗಳಿವೆ.

ಮೈಸೂರಿನಿಂದ ಮೇಲುಕೋಟೆಗೆ ಪ್ರತಿದಿನವೂ ಒಂದು ಬಸ್ಸ್ ಹೋಗುತ್ತದೆ ನಾಗಮಂಗಲ, ಹಿರೋಡೆಯ ಮಾರ್ಗವಾಗಿ ಮೈಸೂರಿಗೆ ಹೋಗುವ ಬಸ್ಸುಗಳಲ್ಲಿಯೂ ಪ್ರಯಾಣ ಮಾಡಿ, ಜಕ್ಕನಹಳ್ಳಿಯಲ್ಲಿ ಗಾಡಿ ಮಾಡಿಕೊಂಡು ಮುಂದರಿಯ ಬಹುದು ಉತ್ಸವಕಾಲದಲ್ಲಿ ಮೈಸೂರಿನಿಂದ ಅನೇಕ ಬಸ್ಸುಗಳು ಬರುತ್ತವೆ.

## 19. (a) ಶ್ರೀ ಭಗವನ್ ಮುಖೋಲ್ಲಾಸಿನೀ ಸಭೆಯು ಮತ್ತು ಇತರ ಸಭೆಗಳು.

ಈ ಸಭೆಯು 1920 ರಲ್ಲು ಸ್ಥಾಪಿತವಾಗಿ ಇದುವರೆಗೂ ಅವಿಚ್ಛಿನ್ನವಾಗಿ ನಡೆಯುತ್ತಲಿದೆ ಇದಕ್ಕೆ 10 ಜನ ಮೆಂಬರುಗಳೂ ಇರುತ್ತಾರೆ ಮ|| ಗಳಾದ ವೆಂಕಟನರಸಿಂಹಾಚಾರ್ ಮತ್ತು ಪೆನೆಗೊಂಡೆ ರಾಘವಾಚಾರ್

ಎಂಬುವರು ಬಹಳ ವಿತರಣೆಯಿಂದ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಿರುವಂತೆ ಕಂಡುಬರುತ್ತದೆ. ವೆಂಬರುಗಳ ಪೈಕಿ ಕೆಲಸರು ಪ್ರತಿವರ್ಷವೂ ದೇಶಾಟನೆಯಂ ಮಾಡಿ, ಹಣವನ್ನು ವಸೂಲ್ಮಾಡಿಕೊಂಡು ಬಂದು, "ಸರ್ವಾಣಿ ಧರ್ಮಜಾಲಾನಿ ಸಾಪಾಯಾನಿ ಕಲೌಯುಗೆ। ಅನ್ನದಾನಂ ಹತೌಭಕ್ತಿ ರನಪಾಯಮಿದಂ ದ್ವಯಂ॥" ಎಂಬಂತೆ, ಪ್ರತಿವರ್ಷವೂ ಶ್ರೀವೈರಮುಡಿಯ ಬ್ರಹ್ಮೋತ್ಸವಕಾಲದಲ್ಲಿ (ನಾಗವಲ್ಲಿ ಮಹೋತ್ಸವದಿಂದ ಮಹಾಭಿಷೇಕದ ವರೆಗೆ) ಯಾತ್ರಾರ್ಥಿಗಳಾಗಿ ಬಂದಂತಹ ಮಹಾಜನಗಳಿಗೆ, ಶ್ರೀವೇದಾಂತ ದೇಶಿಕರವರ ಸನ್ನಿಧಿಯಲ್ಲಿ ರಾತ್ರಿಕಾಲ ಸಮಾರಾಧನೆ ಪೂರ್ವಕವಾಗಿ ಆದರಿಸುವರು ಇದಕ್ಕೋಸ್ಕರ ಸರಾಸರಿ ಜಮಾ ಖರ್ಚು 800 ರೂಪಾಯಿಗಳಾಗುತ್ತವೆ. ಜಮಾ ಖರ್ಚು ಪಟ್ಟಿಯನ್ನು ಪ್ರತಿವರ್ಷವೂ ಮಹಾಜನಗಳ ತಿಳುವಳಿಕೆಗೆ ತರುತ್ತಲಿರುವರು. ಆಸ್ತಿಕ ಶಿಖಾಮಣಿಗಳು ತಮ್ಮ ಸ್ವಹಸ್ತ ಪರಹಸ್ತಮೂಲಕ ಸಹಾಯ ಮಾಡಿದಲ್ಲಿ ಭಾಗವತಾರಾಧನೆಯನ್ನು ಇತ್ಯೋಪ್ಯತಿಶಯಿತವಾಗಿ ಮಾಡಲು ಅನುಕೂಲಿಸುತ್ತೆಂದು ಪ್ರಾಜ್ಞರು ಘಂಟಾಘೋಷವಾಗಿ ಹೇಳುತ್ತಲಿರುವರು.

### (b) ಶ್ರೀ ವೇದಾಂತದೇಶಿಕರವರ ಕೈಂಕರ್ಯಸಭೆಯು

ಇದು ಸುಮಾರು 30 ವರ್ಷಗಳ ಹಿಂದೆ ಸ್ಥಾಪಿತವಾಗಿ, ಈಗ 5-6 ವರ್ಷಗಳ ಕೆಳಗೆ ನಮ್ಮ ಘನಸರ್ಕಾರದವರಿಂದ ರಿಜಸ್ಟರ್ ಮಾಡಲ್ಪಟ್ಟಿದೆ. ಪುದುವಟ್ಟು ಹಾಕಿರುವ ಮಹಾಜನಗಳ ಇಷ್ಟದಂತೆ, ಈ ಸಭೆಯವರು ಸಕಾಲದಲ್ಲಿ ಸೇವಾರ್ಥಗಳನ್ನು ನಡೆಸಿಕೊಂಡು ಬರುತ್ತಲಿರುವರು. ಶ್ರೀ ಪರಕಾಲ ಸ್ವಾಮಿಗಳವರು ಇದಕ್ಕೆ ಅಭಿಮಾನಿಶಾಲಿಗಳಾಗಿರುವರು. ಸಭೆಗೆ ಟ್ರಸ್ಟಿಗಳು ಸಹ ಏರ್ಪಡಿಸಲ್ಪಟ್ಟಿರುವರು

### (c) ಶ್ರೀ ವರವರಮುನಿ ಸಭೆಯು.

ಪ್ರತಿವರುಷವೂ ಶ್ರೀ ಪಿಳ್ಳೈಲೋಕಾಚಾರ್ಯರ ತಿರುನಕ್ಷತ್ರ ಮತ್ತು ಶ್ರೀ ಜೀಯರ್‌ರವರ ತಿರುನಕ್ಷತ್ರಗಳ ಸೇವಾರ್ಥ ಮತ್ತು ಕೈಂಕರ್ಯಕ್ಕೋಸ್ಕರ ಚಂದಾಮೂಲಕ ಹಣವನ್ನು ವಸೂಲ್ಮಾಡಿ, ಈ ಮಹತ್ಕಾರ್ಯವನ್ನು ಬಹಳ ಶ್ರದ್ಧೆಯಿಂದ ನಡೆಸುತ್ತಲಿರುವರು.

(d) ಶ್ರೀ ವಿವೇಕೋಲ್ಲಾಸಿನೀ ಸಭೆಯು.

ಶ್ರೀ ರಾಮಾನುಜಾಚಾರ್ಯರವರ ತಿರುನಕ್ಷತ್ರದ ಸೇವೆಯು ಶಾಶ್ವತವಾಗಿ ನಡೆಯಲು ಸುಮಾರು 50೦ ರೂಪಾಯಿ ಖರ್ಚುಮಾಡಿ ತಿರುನಕ್ಷತ್ರೋತ್ಸವವನ್ನು ನಡೆಸುತ್ತಲಿರುವಂತೆ ತಿಳಿಯಬರುತ್ತದೆ.

(e) ಶ್ರೀ ಪಲ್ಲವೋತ್ಸವ ವಿವರ್ಧಿನೀ ಸಭೆಯು.

ಮಹಾಜನಗಳು ಈಉತ್ಸವಕ್ಕೆ ಚಂದಾ ವಸೂಲ್‌ಮಾಡಿ ಶ್ರೀಶನ ಸೇವೆಯಂ ಮಾಡುತ್ತಲಿರುವರು.

(f) ಉಭಯವೇದಾಂತ ಪ್ರವರ್ತನ ಸಭೆಯು

ಇದು 1902 ನೆಯ ಇಸ್ವಿಯಲ್ಲಿ ಸ್ಥಾಪಿಸಲ್ಪಟ್ಟಿತು. ಪ್ರತಿ ವರ್ಷದಲ್ಲಿಯೂ, ಶ್ರೀಮದಾಚಾರ್ಯರ ತಿರುನಕ್ಷತ್ರ ಮಹೋತ್ಸವಕಾಲದಲ್ಲಿ ಸಭೆ ಸೇರಿ, ವೈದಿಕವಿದ್ಯೆಯಲ್ಲಿ ತೇರ್ಗಡೆಯಾದವರಿಗೆ ಬಹುಮಾನ ಕೊಡುವರು

20 ಶಾಸನಗಳು

ವಿಷ್ಣುವರ್ಧನರಾಯನ ಕಾಲನಲ್ಲಿ ಇಲ್ಲಿಯ ದೇವಸ್ಥಾನಗಳು ಕಟ್ಟಲ್ಪಟ್ಟಂತೆಯೂ, ನಂತರ ವಿಜಯನಗರದ ಅರಸರಿಂದಲೂ ಮತ್ತು ಮೈಸೂರು ಶ್ರೀಮನ್ಮಹಾರಾಜರುಗಳಿಂದಲೂ ವಿಸ್ತರಿಸಲ್ಪಟ್ಟಿರುವಂತೆ ಕಂಡುಬರುತ್ತದೆ.

ಕ್ರಿ॥ ಶ॥ 1155 ನೆಯ ಶಾಸನದಲ್ಲಿ ಶ್ರೀಯವರುಗಳಿಗೆ ಹೊಯಿಸಳ ದೇವರಾಯನ ಆಳ್ವಿಕೆಯಲ್ಲಿ ಕೆಲವು ಗ್ರಾಮಗಳನ್ನೂ, ಭೂಸ್ಥಿತಿಗಳನ್ನೂ ಕೊಟ್ಟಿರುವರು

ಕ್ರಿ॥ ಶ॥ 12೦0 ನೆಯ ಶಾಸನದಲ್ಲಿ ಒಬ್ಬನಾಯಕರಿಂದ ತಿರುನಾರಾಯಣ ಪೆರುಮಾಳಿಗೆ ಭೂಸ್ಥಿತಿಯನ್ನು ಕೊಟ್ಟಿರುವರು.

ಕ್ರಿ॥ ಶ॥ 122೨ ರಲ್ಲಿ ಹೊಯಿಸಳವೀರಬಲ್ಲೂರ ಮಹಾರಾಜರ ಆಳ್ವಿಕೆಯಲ್ಲಿ ದೇವರಸೇವೆಗೆ ಭತ್ತದಗದ್ದೆಯನ್ನು ಬಿಟ್ಟಿರುವರು

14 ನೆಯ ಶತಮಾನದಲ್ಲಿ ವಿಜಯನಗರದ ದೊರೆಗಳಿಂದಲೂ, ನಾಗಮಂಗಲದ ಪ್ರಭುಗಳಿಂದಲೂ, ಮೇಲುಕೋಟೆಯು ಪುನರುಜ್ಜೀವಿತವಾಯಿತೆಂದು ಕಂಡುಬರುತ್ತದೆ.

41 ನೆಯ ಶತಮಾನದಲ್ಲಿ ಮುಸಲ್ಮಾನರಾಜರು ಮೇಲುಕೋಟೆಯ ದೇವಸ್ಥಾನಗಳಿಗೆ ಮುತ್ತಿಗೆಹಾಕಿದಂತೆ ಕಂಡು ಬರುತ್ತದೆ.

ಕ್ರಿ|| ಶ|| 1416 ನೆಯ ಇಸವಿಯಲ್ಲಿ ಶ್ರೀಯವರ ಕೈಂಕರ್ಯಕ್ಕೆ ಕೆಲವು ಸರ್ವಮಾನ್ಯ ಗ್ರಾಮಗಳನ್ನು ಬಿಟ್ಟಿರುವರು

ಕ್ರಿ|| ಶ|| 1446 ನೆಯ ಇಸವಿಯಲ್ಲಿ ತಿರುಮಲರಾಯನಿಂದ ಕೆಲವು ಭೂಸಿದ್ಧಿಗಳು ಕೊಡಲ್ಪಟ್ಟಿವು.

ಕ್ರಿ. ಶ. 1458 ರಲ್ಲಿ ಶ್ರೀ ಯದುಗಿರಿಯಮ್ಮನವರ ಸನ್ನಿಧಿಯ ಮುಂಭಾಗವು ವಿಸ್ತರಿಸಲ್ಪಟ್ಟಿರುವುದು.

ಕ್ರಿ. ಶ. 1614 ನೆಯ ಇಸವಿಯಲ್ಲಿ ಶ್ರೀ ರಾಜಒಡೆಯರವರು ಕೆಲವು ಗ್ರಾಮಗಳನ್ನು ಕೊಟ್ಟಿರುವರು ಅಲ್ಲದೆ ಅಷ್ಟತೀರ್ಥೋತ್ಸವದಲ್ಲಿ ಶ್ರೀಸಂಪತ್ಕುಮಾರರಿಗೆ ಧರಿಸುವ ಕಿರೀಟವು ಈ ಮಹಾಪ್ರಭುಗಳು ಮಾಡಿಸಿ ಕೊಟ್ಟಂತೆ ಕಂಡುಬರುವುದು

ಈ ಪ್ರಭುಗಳು ದೇವರಸೇವೆಗೋಸ್ಕರ ಮುತ್ತಿಗೆ ಎಂಬ ಗ್ರಾಮನ್ನು 50 ವೃತ್ತಿಯನ್ನೂ ಸಹ ಕೊಟ್ಟಿರುವಂತೆ ತಿಳಿಯ ಬರುವುದು.

ಕ್ರಿ. ಶ. 1771 ರಲ್ಲಿ ಮಹಾರಾಷ್ಟ್ರ ಮತ್ತು ಹೈದರಲ್ಲಿಯ ಸೈನ್ಯಗಳು ಯದುಗಿರಿಯ ದಕ್ಷಿಣಭಾಗದಲ್ಲಿ ನೆಲಸಿ, ಮೇಲುಕೋಟೆಯನ್ನು ಕೊಳ್ಳೆ ಹೊಡೆದು, ಕಬ್ಬಿಣಕ್ಕಾಗಿ ರಥವನ್ನು ಸುಟ್ಟಂತೆ ಕಂಡುಬರುವುದು.

ಕ್ರಿ. ಶ. 1785 ರಲ್ಲಿ ಟೀಪುಸುಲ್ತಾನರು ಕೆಲವು ಆನೆಗಳನ್ನು, ಶ್ರೀಯವರುಗಳಿಗೆ ಬಂಗಾರದ ಬಟ್ಟಲುಗಳನ್ನು ಕೊಟ್ಟಂತೆ ಕಂಡು ಬರುವುದು

ಕ್ರಿ. ಶ 17—1 ರಲ್ಲು ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ಈ ದೇವಸ್ಥಾನಗಳನ್ನು ಜೀರ್ಣೋದ್ಧಾರಕ ಮಾಡಿದುದಲ್ಲದೆ, ಶ್ರೀಶನ ಪೂಜೋಪಕರಣಗಳನ್ನೂ ಬಹಳ ಅಮೂಲ್ಯವಾದ ನವರತ್ನಖಚಿತವಾದ ಹಾರಗಳನ್ನೂ, ಪೀತಾಂಬರವೇ ಮುಂತಾದುವನ್ನೂ ದಯಪಾಲಿಸಿರುವರು. ಅಲ್ಲದೆ ವೈರಮುಡಿ, ರಾಜಮುಡಿಗಳಿಗೆ ಸಮಾನವಾದ ಅಮೂಲ್ಯವಾದ ರತ್ನಗಳಿಂದ ಮಾಡಲ್ಪಟ್ಟ ಕಿರೀಟವನ್ನೂ ಶ್ರೀ ಶಲ್ವಪಿಳ್ಳೆಯವರಿಗೆ ಒಪ್ಪಿಸಿರುವರು. ಇದನ್ನೇ ಶ್ರೀಕೃಷ್ಣರಾಜ ತಿರುನಾಳಿನಲ್ಲಿ ಶ್ರೀಯವರಿಗೆ ಧರಿಸುವರು

ಈ ಮಹನೀಯರೂ ಶ್ರೀಶನ ಕೈಂಕರ್ಯವು ಆಚಂದ್ರಾರ್ಕವಾಗಿ ನಡೆಯಲು ದೇವಸ್ಥಾನದ ನೌಕರರಿಗೆ ಅಕ್ಕಿಯನ್ನೂ, ಅನ್ನವನ್ನೂ ಏರ್ಪಾಡು ಮಾಡಿರುವದಲ್ಲದೆ, ಅನೇಕ ಕಟ್ಟಡಗಳನ್ನೂ, ವಾಪೀಕೂಪ, ಕಟಾಕಗಳನ್ನೂ ಕಟ್ಟಿಸಿ ಕೊಟ್ಟಿರುವುದು ಚಿರಸ್ಮರಣೀಯವಾಗಿದೆ

# ಏನೆಳಯ ಅಧ್ಯಾಯವು.



ತೀರ್ಥಗಳು

1 ಶ್ರೀ ಕಲ್ಯಾಣ ತೀರ್ಥವು,

ಶ್ರೀ ಯೋಗಾನೃಸಿಹ್ಮಸ್ವಾಮಿಯವರ ಬೆಟ್ಟದ ಕಿಬ್ಬಿಯಲ್ಲಿ ಈ ತೀರ್ಥವು ಕಂಗೊಳಿಸುವುದು ವರಾಹರೂಪಿಯಾದ ಶ್ರೀಮನ್ನಾರಾಯಣನು ಸಮುದ್ರದಲ್ಲಿ ಮುಳಿಗಿದ್ದ ಭೂಮಿಯನ್ನು ಮೇಲಕ್ಕೆತ್ತಿಕೊಂಡು ಬರುವಾಗ, ಅವನ ದಿವ್ಯದೇಹದಿಂದುಂಟಾದ ಬೆವರಿನಿಂದ ಈ ತೀರ್ಥವು ಆವಿರ್ಭವಿಸಿರುವುದು ಪೂರ್ವದಲ್ಲಿ ಶ್ರೀ ಸನತ್ಕುಮಾರನು, ಸತ್ಯಲೋಕದಿಂದ ಶ್ರೀಯಃಪತಿಯನ್ನು ಈ ಕ್ಷೇತ್ರಕ್ಕೆ ಬಿಜಮಾಡಿಸಿಕೊಂಡುಬಂದು, ಈ ತೀರ್ಥದ ಬಳಿ ವಿಮಾನವನ್ನು ಇಳಿಸಿ ಈ ದಿವಸವೇ "ಕಲ್ಯಾಣ, ಕಲ್ಯಾಣ" ಎಂದು ಮಹರ್ಷಿಗಳು ಸ್ತುತಿಸಿದುದರಿಂದ, ಅನ್ವರ್ಥವಾಗಿ ಈತೀರ್ಥಕ್ಕೆ "ಕಲ್ಯಾಣಿ" ಎಂದು ಹೆಸರು ಬಂದಿತು ಈ ತೀರ್ಥದಸುತ್ತಲೂ, ಶ್ರೀಮಾಧವ, ಜ್ಞಾನಾಶ್ವತ್ಥ; ಪಂಚಭಾಗವತಕ್ಷೇತ್ರ, ಆದಿಶೇಷ, ಗಜೇಂದ್ರವರದ, ವರಾಹಸ್ವಾಮಿ, ಕರಣೀಕನಾರಾಯಣ ಸನ್ನಿಧಿಗಳಿರುತ್ತವೆ.

ಇದು ಗಂಗಾದಿ ಸಕಲ ತೀರ್ಥಗಳಿಗೂ ಜನ್ಮಭೂಮಿಯೆಂದೂ, ಇದರಲ್ಲಿ ಭಕ್ತಿಪುರಸ್ಸರವಾಗಿ ಫಾಲ್ಗುಣ ಶುದ್ಧ ಪೌರ್ಣಮಿಯ, ದಿವಸ ಸರ್ವಪ್ರಯತ್ನದಿಂದಲಾದರೂ ಸ್ನಾನವಂ ಮಾಡಿ, ಶ್ರೀಶನ ದರ್ಶನವನ್ನು ಮಾಡಿದವರಿಗೆ ಪಂಚಮಹಾಪಾತಕಗಳು ನಶಿಸಿ ಹೋಗುತ್ತೆಂದೂ, ಭಗವಂತನ ಅನುಗ್ರಹದಿಂದ ಐಹಿಕವಾದ ಸಮಸ್ತಫಲವು ಲಭಿಸುವುದಲ್ಲದೆ, ಕೊನೆಗೆ ಮೋಕ್ಷಸಾಮ್ರಾಜ್ಯವೂ ಸಿಕ್ಕುವುದು.

## 2. ವೇದಪುಷ್ಕರಿಣೀ ತೀರ್ಥವು.

ಯದುಶೈಲದ ದಕ್ಷಿಣಭಾಗದಲ್ಲಿ ವೇದ ಪುಷ್ಕರಣಿ ಎಂಬ ತೀರ್ಥವಿರುವುದು ಇಲ್ಲಿ ಭಗವಂತನು ವೇದಪುರುಷನ ಪ್ರಾರ್ಥನೆಯಂತೆ, ಶ್ರೀದತ್ತಾತ್ರೇಯ ರೂಪಿಯಾಗಿ ಅವತರಿಸಿ, ಸನ್ಯಾಸಾಶ್ರಮವನ್ನು ಪರಿಗ್ರಹಿಸಿ, ನಾಲ್ಕುವೇದಪುರುಷರನ್ನು ಶಿಷ್ಯರನ್ನಾಗಿ ಮಾಡಿಕೊಂಡು, ಪಾಷಂಡ ನಿರಸನ ಮಾಡಿ, ವೇದಾರ್ಥವನ್ನು ಧೃಡೀಕರಿಸಿದರು ಈ ಪುಷ್ಕರಣಿಯ ಬಳಿಯಲ್ಲಿ ಶ್ರೀ ದತ್ತಾತ್ರೇಯರು ಕಾಷಾಯವನ್ನು ಧರಿಸಿದ ಶಿಲೆಗೆ "ಪರಿದಾನ ಶಿಲಾ" ಎಂದು ಕರೆಯುವರು. ಈಗಲೂ ಆಶ್ರಮ ಸ್ವೀಕಾರಮಾಡುವವರು ಈ ಶಾಲೆಯ ಹತ್ತಿರದಲ್ಲಿ ಕಾಷಾಯವಂ ಪರಿಗ್ರಹಮಾಡುವರು. ಯಾವ ಮನುಜನು ಈ ತೀರ್ಥದಲ್ಲಿ ಶಾಸ್ತ್ರೋಕ್ತವಾಗಿ ಸ್ನಾನಮಾಡುವನೋ, ಅವನು ಇಹಲೋಕದಲ್ಲಿ ಸಕಲ ದುಃಖಗಳಿಂದಲೂ ವಿಮುಕ್ತನಾಗಿ, ಕೊನೆಗೆ ವಿಷ್ಣುಪದವನ್ನು ಹೊಂದುವನು.

## 3. ಧನುಷ್ಕೋಟಿ ತೀರ್ಥವು.

ಕಲ್ಯಾಣ ತೀರದಲ್ಲಿನ ಸೀತಾರಣ್ಯಕ್ಷೇತ್ರದಲ್ಲಿ ಶ್ರೀರಾಮನು ಕೊಂಚ ಕಾಲ ವಾಸವಾಗಿದ್ದನು. ಈ ಗಿರಿಯ ದಕ್ಷಿಣಾಗ್ರದಲ್ಲಿ ಶ್ರೀರಾಮನ ಬಾಣ ಪ್ರಯೋಗದಿಂದ ಉದ್ಭವಿಸಿದ ಈಪುಣ್ಯತೀರ್ಥಕ್ಕೆ "ಧನುಷ್ಕೋಟಿ" ಎಂದು ಕರೆಯುವರು. ಈ ತೀರ್ಥದಲ್ಲಿ ಭಕ್ತಿಯುತರಾಗಿ ಸ್ನಾನಮಾಡುವವರು ಧನ್ಯರಾಗಿ ಭಾಗವತೋತ್ತಮರಾಗುವರೆಂದು ಪ್ರತೀತಿಯುಂಟು.

## 4. ಯಾದವ ತೀರ್ಥವು.

ಯತಿಶೈಲದ ವಾಯುವ್ಯ ದಿಕ್ಕಿನಿಂದ ದಕ್ಷಿಣಾಭಿಮುಖವಾಗಿ ಯಾದವ ನದಿ ಎಂಬ ಒಂದು ಪುಣ್ಯನದಿಯು ಪ್ರವಹಿಸುತ್ತಲಿರುವುದು. ಇದರ ತಟದಲ್ಲಿ ಯಾದವೇಂದ್ರನೆಂಬ ಒಬ್ಬ ದೊರೆಯು ಯಜ್ಞಮಾಡಿ, ಇಂದ್ರ ಪದವಿಯನ್ನು ಪಡೆವನೆಂದು ಇತಿಹಾಸವುಂಟು. ಇದಕ್ಕೆ ಪೂರ್ವಭಾಗದಲ್ಲಿ "ಯಾದವ ಸರಸ್ಸು" ಎಂಬ ಒಂದು ದಿವ್ಯತೀರ್ಥವಿರುವುದು. ಇದರಲ್ಲಿ ಭಕ್ತಿಪೂರ್ವಕವಾಗಿ ಸ್ನಾನಮಾಡಿ ಶ್ರೀಶನನ್ನು ದರ್ಶನಮಾಡಿದುದಲ್ಲಿ ದುಃಖವು ಕಳೆದು, ಜ್ಞಾನ ಮೋಕ್ಷ ಸುಖಾದಿಗಳು ಉಂಟಾಗುವುವು

5. ದರ್ಭ-ತೀರ್ಥವು.

ನಾರಾಯಣಗಿರಿಯ ಪಶ್ಚಿಮಭಾಗದ ಅಡಿಯಲ್ಲಿ ಈ ತೀರ್ಥವಿರುವುದು ಪಾಂಚರಾತ್ರ ಪ್ರವರ್ತಕರಾದ ಶಾಂಡಿಲ್ಯ ಮಹಾಮುನಿಗಳು ಇಲ್ಲಿ ತಪಸ್ಸನ್ನುಮಾಡಿ, ಧರ್ಮ ಸಂಸ್ಥಾಪನೆಯುಂಗೈದರು ಪ್ರಾಯಶ್ಚಿತ್ತ ಹೀನರಾದವರೂ ಈ ತೀರ್ಥದಲ್ಲಿ ಮಿಂದು, ಭಕ್ತಿಪುರಸ್ಸರವಾಗಿ ಶ್ರೀಮನ್ನಾರಾಯಣನನ್ನು ಸೇವಿಸಿದುದಲ್ಲಿ ಪರಿಶುದ್ಧರಾಗುವರು

6 ಪಲಾಸ ತೀರ್ಥವು.

ದರ್ಭತೀರ್ಥಕ್ಕೆ ಉತ್ತರಭಾಗದಲ್ಲಿ ಈ ತೀರ್ಥವು ಕಂಗೊಳಿಸುವದು. ಪೂರ್ವದಲ್ಲಿ ತ್ರಿಶಂಕುವೆಂಬ ಮಹಾರಾಜನು ಯಾಗಮಾಡುವ ಪ್ರಸಂಗದಲ್ಲಿ ವಸಿಷ್ಟ ಪುತ್ರರು ವಿಶ್ವಾಮಿತ್ರನಿಂದ ಶಾಪಗ್ರಸ್ತರಾದರು ಇವರು ಈ ಕ್ಷೇತ್ರ ಮತ್ತು ತೀರ್ಥದ ಮಾಹಾತ್ಮ್ಯವನ್ನು ಕೇಳಿ ಇಲ್ಲಿ ಭಕ್ತಿಯುತರಾಗಿ ಸ್ನಾನಮಾಡಿ, ಶ್ರೀಶನ ಸೇವೆಯನ್ನುಮಾಡಿದುದರಿಂದ ಇವರಿಗೆ ಚಂಡಾಲತ್ವವು ನೀಗಿತು ಆದುದರಿಂದ ಈ ತೀರ್ಥವು "ಪತಿತಪಾವನತೀರ್ಥ" ವೆಂದೂ, ಈ ಕ್ಷೇತ್ರವು "ಪತಿತಪಾವನ ಕ್ಷೇತ್ರ"ವೆಂದೂ, ಪ್ರಸಿದ್ಧವಾಯಿತು ಆದಪ್ರಯುಕ್ತ ಪ್ರತಿಯೊಬ್ಬ ಮಾನವನೂ, ತನ್ನ ಪಾಪನಾಶನಾರ್ಥವಾಗಿ, ಈ ತೀರ್ಥದಲ್ಲಿ ಭಕ್ತಿಯಿಂದ ಸ್ನಾನಮಾಡತಕ್ಕದು

7. ಪದ್ಮ ತೀರ್ಥವು.

ಪಲಾಸತೀರ್ಥದ ಉತ್ತರದಿಕ್ಕಿನಲ್ಲಿ ಈ ತೀರ್ಥವಿರುವುದು. ಶ್ರೀ ಸನತ್ಕುಮಾರಾದಿಗಳು ಈ ತೀರ್ಥದಲ್ಲಿ ಬೆಳೆಯುತ್ತಲಿದ್ದ ಕಮಲಗಳನ್ನು ಶ್ರೀಯಃಪತಿಗೆ ಸಮರ್ಪಣೆ ಮಾಡುತ್ತಲಿದ್ದುದರಿಂದ, ಇದಕ್ಕೆ ಈ ಹೆಸರು ಬಂದಿತು ಪರಮಪಾವನವಾದ ಈ ತೀರ್ಥದಲ್ಲಿ ಸ್ನಾನಮಾಡಿದವರಿಗೆ ನಿಖಿಲ ಪಾಪವೂ ನಾಶವಾಗಿ, ಸರ್ವವಿಧವಾದ ಶ್ರೇಯಸ್ಸುಂಟಾಗುವುದು.

8. ಮೈತ್ರೇಯ ತೀರ್ಥವು.

ಇದು ನಾರಾಯಣ ತೀರ್ಥಕ್ಕೂ ಮತ್ತು ಕಲ್ಯಾಣಿ ತೀರ್ಥಕ್ಕೂ ನಡುವೆಯಿರುವುದು. ಇಲ್ಲಿ ಪರಾಶರಮುನಿ ಮೈತ್ರೇಯರಿಗೆ ವಿಷ್ಣುಪುರಾಣವನ್ನು

ಉಪದೇಶಿಸಿದನೆಂದು ಪ್ರತೀತಿಯುಂಟು. ಈ ತೀರ್ಥದಲ್ಲಿ ನಿಷ್ಕಲ್ಮಷಚಿತ್ತ ರಾಗಿ ಮಿಂದವರಿಗೆ ದೈವಭಕ್ತಿಯು ಹೆಚ್ಚುವುದಲ್ಲದೆ, ಪರಮಪದವು ದೊರೆಯುವುದು

## 9. ನಾರಾಯಣ ತೀರ್ಥವು.

ವೈಕುಂಠಗಂಗೆಗೆ ದಕ್ಷಿಣಭಾಗದಲ್ಲಿ ಈ ದಿವ್ಯತೀರ್ಥವಿರುವುದು. ಪೂರ್ವದಲ್ಲಿ ಭಾಗವತೋತ್ತಮರಾದ ವಿಷ್ಣುಭಕ್ತರೆಂಬುವರು, ಈ ತೀರ್ಥದ ಬಳಿ ತಪಸ್ಸುಮಾಡಿ, ಮೋಕ್ಷಸಾಮ್ರಾಜ್ಯವನ್ನು ಪಡೆದರೆಂದು ಹೇಳುವರು. ಈ ತೀರ್ಥದಲ್ಲಿ ಅರಿಷಡ್ವರ್ಗಗಳನ್ನು ಬಿಟ್ಟು, ಶುದ್ಧಮನಸ್ಕರಾಗಿ, ಸ್ನಾನಮಾಡಿದವರಿಗೆ ಸರ್ವಪಾಪವೂ ನಾಶವಾಗಿ, ಶ್ರೀಮನ್ನಾರಾಯಣನ ಕೃಪೆಯಿಂದ ಮೋಕ್ಷವು ಕರತಲಾಮಲಕದಂತೆ ಲಭಿಸುವುದು

## 10. ವೈಕುಂಠಗಂಗೆ ಎಂಬ ತೀರ್ಥವು.

ಇದನ್ನು "ತೊಟ್ಟಿಲಮಡು" ಎಂದು ಕರೆಯುವರು. ಇದು ಯಾದವಗಿರಿಗೆ ಉತ್ತರದಿಕ್ಕಿನಲ್ಲಿ ತಿಳಿನೀರಿನಿಂದ ಕೂಡಿದ ಒಂದು ನದಿಯಾಗಿ ಪ್ರವಹಿಸುತ್ತಲಿರುವುದು. ಇದಕ್ಕೆ "ವಿರಜಾನದಿ" ಎಂಬ ಉಪನದಿಯೂ ಸೇರುವುದು ಇದಕ್ಕೆ ವೈಕುಂಠಗಂಗೆ ಎಂದೂ ಹೆಸರುಂಟು. ಈ ನದಿಯಲ್ಲಿ ಭಕ್ತಿಭಾವದಿಂದ ಸ್ನಾನವಂ ಮಾಡಿದವರಿಗೆ ಗಂಗಾದಿ ಸಕಲ ಪುಣ್ಯತೀರ್ಥಗಳ ಸ್ನಾನದ ಫಲವು ಕರಗತವಾಗುವುದು.

ಮೇಲ್ಕಂಡ ತೀರ್ಥಗಳಲ್ಲದೆ, ಈ ಪುಣ್ಯಕ್ಷೇತ್ರದಲ್ಲಿ ಅನೇಕ ದಿವ್ಯ ಉಪತೀರ್ಥಗಳು ಇರುವಂತೆಯೂ, ಈ ತೀರ್ಥಗಳ ಮಹಿಮೆಯು ಇಲ್ಲಿಯ ಐತಿಹ್ಯ ಪ್ರಾಮಾಣ್ಯದಿಂದ ವ್ಯಕ್ತವಾಗುವುದು.



# ಎಂಟನೆಯ ಅಧ್ಯಾಯವು.

## ಪೂರ್ವಚರಿತ್ರವು.

“ಅಷ್ಟೋತ್ತರ ಶತಸ್ಥಾನೇ ಸಾರೇ ಯಾದವ ಭೂದರೇ” ಎಂಬಂತೆ, ಮೇಲುಕೋಟೆಯು (ತಿರುನಾರಾಯಣಪುರ) ನಮ್ಮ ಈಗಿನ ಮೈಸೂರು ಸೀಮೆಗೆ ಸೇರಿದ ಒಂದು ಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಇದು, ಜಂಬೂದ್ವೀಪಕ್ಕೆ ಸೇರಿದ ನಮ್ಮ ಭಾರತ ಭೂಮಿಯಲ್ಲಿ ಒಂದಾನೊಂದು ದಿವ್ಯಕ್ಷೇತ್ರವಾಗಿದ್ದು, ಅಲ್ಲಿ ಅರ್ಚಾವಿಗ್ರಹನಾಗಿ ನೆಲಸಿರುವ ಶ್ರೀಮನ್ನಾರಾಯಣನು, ಕೃತ, ತ್ರೇತಾ, ದ್ವಾಪರ, ಕಲಿಯುಗಗಳಲ್ಲಿಯೂ, ಆಯಾ ಯುಗಗಳಲ್ಲಿ ಅವತರಿಸಿದ್ದ ಋಷಿಗಳಿಂದಲೂ, ಆಳ್ವಾರ್ ಆಚಾರ್ಯರುಗಳಿಂದಲೂ ಪೂಜಿಸಲ್ಪಡುತ್ತಿದ್ದುದು, ಪುರಾಣಾದಿಗಳಿಂದ ವಿದಿತ ವಿಷಯವಾಗಿದೆ ಶ್ರೀರಾಮನು ತ್ರೇತಾಯುಗದಲ್ಲಿ ದುಷ್ಟನಿಗ್ರಹ ಶಿಷ್ಟಪರಿಪಾಲನೆಗೋಸುಗ ಅಯೋಧ್ಯೆಯಲ್ಲವತರಿಸಿ, ಪಿತೃವಾಕ್ಯಪರಿಪಾಲನ ವ್ಯಾಜದಿಂದ ವಿಂಧ್ಯಾದ್ರಿಯ ದಕ್ಷಿಣಭಾಗದಲ್ಲಿರುವ ದಂಡಕಾರಣ್ಯದಲ್ಲಿ ಸಂಚರಿಸುತ್ತ, ಅಲ್ಲಲ್ಲಿ ಪರ್ಣಶಾಲೆಗಳನ್ನು ಕಟ್ಟಿಕೊಂಡು, ತಪಸ್ಸು ಮಾಡುತಲಿದ್ದ ಋಷಿಗಳು, ರಾಕ್ಷಸರ ಬಾಧೆಯಂ ತಾಳಲಾರದೆ, ತನ್ನನ್ನು ಮೊರೆಹೊಂದಲು, ಅವರ ಈತಿಬಾಧೆಗಳನ್ನು ತಪ್ಪಿಸಿ, ವರಬಲದಿಂದಕೊಬ್ಬಿ ದುಷ್ಟರಾಗಿದ್ದ ರಾವಣಾದಿಗಳನ್ನು ಸಂಹರಿಸಲು ಲಂಕೆಗೆ ಬಂದು, ರಾಕ್ಷಸರೊಡನೆ ಯುದ್ಧಮಾಡಿ, ಜಯಶೀಲನಾದನೆಂದು, ಆದಿಕಾವ್ಯವಾದ ಶ್ರೀಮದ್ರಾಮಾಯಣದಿಂದ ಕಂಡುಬರುವುದು. ದ್ವಾಪರಯುಗದಲ್ಲಿ ಶ್ರೀಕೃಷ್ಣನು ಮಥುರೆಯಲ್ಲಿ ಅವತರಿಸಿ, ಕಲಿಯುಗದ ಪ್ರಾರಂಭದವರೆಗೂ, ಕೌರವ ಪಾಂಡವರ ಯುದ್ಧವೇ ಮುಂತಾದ ವ್ಯಾಜದಿಂದ ಅನೇಕ ದುಷ್ಟರನ್ನು ನಿಗ್ರಹಿಸಿ, ಧರ್ಮಸಂಸ್ಥಾಪನೆಯನ್ನು ಮಾಡಿ, ಪಾಂಡವರಿಗೆ ಏಕಚಕ್ರಾಧಿಪತ್ಯವನ್ನು ಅನುಗ್ರಹಿಸಿದನು. ಈ ವಿಷಯವು ಮಹಾಭಾರತ ಮತ್ತು ಭಾಗತದಿಂದ ವಿಶದವಾಗಿ ಕಂಡುಬರುತ್ತದೆ. ಇದೇ ರೀತಿಯಲ್ಲಿ ಯಾದವಗಿರಿಯ ಮಹಾತ್ಮ್ಯದಿಂದ ಶ್ರೀರಾಮನೂ, ಶ್ರೀಕೃಷ್ಣನೂ, ಈ ಯದುಶೈಲದಲ್ಲಿ ಶ್ರೀಯಃಪತಿಯನ್ನು ಭಕ್ತಿಯಿಂದ ಆರಾಧಿಸಿದ

ವಿಚಾರವು ಸ್ಪಷ್ಟಪಡುವುದು. ಸಾವಿರಾರು ವರ್ಷಗಳಹಿಂದೆ, ಈಗ ಇಂಡಿಯ ಅಥವ ಹಿಂದೂದೇಶವೆಂದು ಕರೆಯಲ್ಪಡುವ ಪ್ರದೇಶವು, ಭರತಚಕ್ರವರ್ತಿಯಿಂದ ಆಳಲ್ಪಡುತ್ತಲಿದ್ದು, ಕಾಲಕ್ರಮದಿಂದ ಈದೇಶವು ಒಡೆದು, ಅನೇಕ ರಾಜಸಂತತಿಗಳಿಂದ ಆಳಲ್ಪಡುತ್ತಲಿದ್ದಿತು. ಮೊದಲು ಈ ದ್ವೀಪದಲ್ಲಿ ಅಲ್ಲಲ್ಲಿ ವಾಸಮಾಡುತಲಿದ್ದವರು, ಕೋಲರು ಮತ್ತು ದ್ರಾವಿಡರೆಂತಲೂ, ಬಹುಕಾಲದಮೇಲೆ ಆರ್ಯರು ಬಂದು ನೆಲಸಿದರೆಂದೂ, ಚರಿತ್ರಾಧಾರದಿಂದ ಕಂಡು ಬರುವುದು. ಕಾಲಕ್ರಮದಲ್ಲಿ ಇತರ ಮತಗಳು ಈಚೆಗೆ ಪ್ರಾಬಲ್ಯಕ್ಕೆ ಬಂದುವಲ್ಲದೆ ಕ್ರಿ|| ಪೂ|| 4-5 ನೆಯ ಶತಮಾನಕ್ಕೆ ಹಿಂದೆಯೇ ವಿದೇಶಿಯರಾದ ಪಾರ್ಸಿ, ಗ್ರೀಕ್, ಸಿಥಿಯನ್, ಮುಂತಾದವರು ಇಂಡಿಯಾ ದೇಶದ ವಾಯುವ್ಯದಲ್ಲಿಯ ಕಣಿವೆಗಳಿಂದಿಳಿದುಬಂದು ರಾಜ್ಯಗಳನ್ನು ಕಟ್ಟಿದರೆಂದೂ, ಕ್ರಿ|| ಶ|| 14 ನೆಯ ಶತಮಾನದಿಂದೀಚೆಗೆ ಯೂರೋಪಿಯನ್ನರವರು ಬಂದು ನೆಲಸಿದರೆಂಬುವುದು, ಚರಿತ್ರಾಧಾರದ ಮೇಲೆ ಹೇಳಬಹುದಾಗಿದೆ. ಒಟ್ಟಿನಲ್ಲಿ ಬ್ರಾಹ್ಮಣರು ಕ್ರಿ|| ಶ|| 3000 ವರುಷಗಳ ಹಿಂದೆಯೇ ನಮ್ಮ ಭಾರತಭೂಮಿಯಲ್ಲಿಯ ದಕ್ಷಿಣದೇಶದಲ್ಲಿ ವಾಸವಾಗಿದ್ದರೆಂದೂ, ಕ್ರಿ. ಶ. 3ನೆಯ ಶತಮಾನದಲ್ಲಿ ಬ್ರಾಹ್ಮಣರು ಮೈಸೂರುಸೀಮೆಗೆ ಬಂದು ನೆಲಸಿದರೆಂದೂ, ಕಂಡುಬರುವುದು.

ನಮ್ಮ ಪೂರ್ವಿಕರಲ್ಲಿ ಹಿಂದಿನ ಚರಿತ್ರೆಯನ್ನು ಆಗಾಗ ಬರೆದಿಡುವ ಸಂಪ್ರದಾಯವಿರಲಿಲ್ಲವು. ಆದುದರಿಂದ ನಮ್ಮ ಮೈಸೂರುಸೀಮೆಯ ಹಿಂದಣ ಚರಿತ್ರೆಯನ್ನು ರಾಮಾಯಣ, ಮಹಾಭಾರತ ಹುಟ್ಟಿದಾರಭ್ಯ, ವಿಜಯನಗರ ಸಂಸ್ಥಾನವು ಕ್ಷೀಣದೆಶೆಗೆ ಬರುವವರೆಗೂ, ಕಾಲಕ್ರಮವಾಗಿ ವಿವರಿಸಲು ಕಷ್ಟಕರವಾಗಿರುವುದು. ಆದರೂ ಈಚೆಗೆ ಕಂಡುಹಿಡಿದಿರುವ ಶಿಲಾಶಾಸನಗಳಿಂದಲೂ, ಹಿಂದೆಚಾರಿಯಲ್ಲಿದ್ದ ಹಳೆಯನಾಣ್ಯಗಳಿಂದಲೂ, ಮತ್ತು ಇತರಲೇಖನಗಳ ಆಧಾರದಿಂದಲೂ, ತಕ್ಕಮಟ್ಟಿಗೆ ವಿಮರ್ಶೆ ಮಾಡಬಹುದಾಗಿದೆ.

ಪುರಾಣ ಮತ್ತು ಇತಿಹಾಸಗಳಿಂದ ಮೇಲುಕೋಟೆಯ ಶ್ರೀ ಚಲುವರಾಯ ಸ್ವಾಮಿಯ ದೇವಸ್ಥಾನವು ಅನಾದಿಯೆಂದೂ, ಕಾಲ ನಿರ್ಣಯವನ್ನು

ಮಾಡಲು ಚರಿತ್ರೆಗಳು ಸಾಕಾದಷ್ಟು ಸಹಾಯಮಾಡದಿದ್ದರೂ, ಇದು ಈಚೆಗೆ ಯಾದವ ವಂಶದ ರಾಜರುಗಳಿಂದ ಪರಿಪಾಲಿಸಲ್ಪಡುತ್ತಿದ್ದು, ಕೊನೆಗೆ ಕ್ರಿ. ಶ. 10 ನೆಯ ಶತಮಾನದಲ್ಲಿ ವಿಷ್ಣುವರ್ಧನ ರಾಜನಿಂದ ಶ್ರೀ ರಾಮಾನುಜಾ ಚಾರ್ಯರ ಮುಖೇನ ಜೀರ್ಣೋದ್ಧಾರ ವಾಯಿತೆಂದೂ ಕಂಡುಬರುತ್ತದೆ. ಮೇಲುಕೋಟೆಯು ಶ್ರೀರಂಗಪಟ್ಟಣಕ್ಕೆ 24 ಮೈಲಿಗಳ ದೂರದಲ್ಲಿದ್ದು ಸಮುದ್ರಮಟ್ಟಕ್ಕಿಂತ 3589 ಅಡಿಗಳ ಎತ್ತರದಲ್ಲಿದೆ. 10 ನೆಯ ಶತ ಮಾನದಲ್ಲಿ ನಮ್ಮ ಮೈಸೂರುಸಂಸ್ಥಾನವು, ಈಗಿನಂತೆ ವಿಸ್ತಾರವಾಗಿರ ಲಿಲ್ಲವು. ಈ ದೇಶದ ಉತ್ತರಭಾಗವು ಮಗಧರಾಜನಾದ ಅಶೋಕ ಚಕ್ರ ವರ್ತಿಗೆ ಸೇರಿತ್ತು. ನಂತರ ಈ ದೇಶವು ಹಲವು ನಾಡುಗಳಾಗಿ ಕ್ರಿ. ಶ. 14 ನೆಯ ಶತಮಾನದ ಮಧ್ಯಕಾಲದವರೆಗೂ ಚಾಲುಕ್ಯರಿಂದಲೂ, ಗಂಗರ ಸರಿಂದಲೂ, ಕ್ರಿ. ಶ. 10ನೆಯ ಶತಮಾನದಿಂದ 13ರರ ವರೆಗೆ ಹೊಯಿಸಳ ಅರಸರಿಂದಲೂ, ಆಳಲ್ಪಡುತ್ತಲಿದ್ದಿತು. ಚಾಲುಕ್ಯರಾಜ್ಯವು ಒಡೆದು ಹೋದ ತರುವಾಯ ನಮ್ಮ ದೇಶದ ಕೆಲವು ಭಾಗಗಳು ಹೊಯಿಸಳ ಬಲ್ಲಾ ಳರ ಕೈಸೇರಿತು. ಈ ವಂಶದಲ್ಲಿ ಪ್ರಸಿದ್ಧನಾದ ಬಿಟ್ಟಿದೇವನೆಂಬ ರಾಜನು ಅನೇಕ ರಾಜ್ಯಗಳನ್ನು ಗೆದ್ದು, ಸ್ವತಂತ್ರನಾಗಿ ರಾಜ್ಯವಾಳುತ್ತಲಿದ್ದನು. ದ್ವಾರಸಮುದ್ರವು (ಹಳೇಬೀಡು) ಇವನ ರಾಜಧಾನಿಯಾಗಿತ್ತು. ಶ್ರೀ ವಿಶಿಷ್ಟಾದ್ವೈತಸಿದ್ಧಾಂತ ಸ್ಥಾಪಕರಾದ ಶ್ರೀರಾಮಾನುಜಾಚಾರ್ಯರವರು ಬಿಟ್ಟಿ ದೇವರಾಜನಿಗೆ, ವೈಷ್ಣವ ದೀಕ್ಷೆಯನ್ನು ಅನುಗ್ರಹಿಸಿ, ವಿಷ್ಣುವರ್ಧನ ರಾಜನೆಂದು ಹೆಸರಿತ್ತರು. ಈತನು ಅನೇಕ ದೇವಾಲಯಗಳನ್ನು ಜೀರ್ಣೋ ದ್ಧಾರಮಾಡಿದನು. ಅದರಂತಯೇ ಮೇಲುಕೋಟೆಯ ದೇವಸ್ಥಾನ ವನ್ನೂ ಜೀರ್ಣೋದ್ಧಾರಮಾಡಿದುದಲ್ಲದೆ, ಕಾವೇರಿನದಿಯ ಇರ್ಕಡೆಗಳಲ್ಲಿ ರುವ 8 ಸರ್ವೋತ್ತಮವಾದ ಗ್ರಾಮಗಳನ್ನು ಈ ದೇವರ ಸೇವೆಗೋಸ್ಕರ ಕೊಟ್ಟು, ಯತಿಗಳಿಗೆ ಮಠವನ್ನು ಕಟ್ಟಿಸಿ, ಹೀನಸ್ಥಿತಿಯಲ್ಲಿದ್ದ ಊರನ್ನು ಕಟ್ಟಿಸಿದನು. 13. ನೆಯ ಶತಮಾನದಲ್ಲಿ ಹೊಯಿಸಳರು ತಮ್ಮರಾಜ್ಯವು ದೆಹಲಿಯ ಸುಲ್ತಾನ್ ಅಲ್ಲಾವುದೀನ್ ಎಂಬುವನಿಂದ ಜಯಿಸಲ್ಪಟ್ಟ ತರು ವಾಯ, ಇವರ ರಾಜಧಾನಿಯು ಶ್ರೀರಂಗಪಟ್ಟಣದ ಬಳಿ ಇರುವ ತೊಂಡ ನೂರಿಗೆ ಬದಲಾಯಿಸಲ್ಪಟ್ಟಿತು. 1343ನೆಯ ಇಸವಿಯಲ್ಲಿ ಈ ರಾಜ್ಯವು

ಒಡೆದು ವಿಜಯನಗರದ ಹಿಂದೂರಾಜರ ಕೈವಶವಾಯಿತು ನಂತರ ವಿಜಯ ನಗರದ ಅರಸರು 13ನೆಯ ಶತಮಾನದಿಂದ 16ನೆಯ ಶತಮಾನದ ವರಿಗೂ (1343-1664) ಆಳುತ್ತಿದ್ದರು. ವಿಜಯಾನಗರದ ಅರಸರ ಪ್ರಾಬಲ್ಯ ಕಾಲದಲ್ಲಿ, ಮೈಸೂರುಸೀಮೆಯು ವಿಜಯನಗರದವರ ಅಧೀನದಲ್ಲಿದ್ದಿತು. ಕ್ರಿ. ಶ. 1564ನೆಯ ಇಸವಿಯಲ್ಲಿ ತಾಳೀಕೋಟೆ ಯುದ್ಧವಾದಬಳಿಕ, ವಿಜ ಯನಗರ ಸಂಸ್ಥಾನವು ಕ್ಷೀಣದೆಶೆಗೆ ಬರಲು, ಅಲ್ಲಲ್ಲಿಯ ಪಾಳಯಗಾರರು ತಲೆಯೆತ್ತಿ, ತಾವೇ ಸ್ವತಂತ್ರವಾಗಿ ಅಲ್ಲಲ್ಲಿ ಅಧಿಕಾರವಮಾಡಲು ಆರಂಭಿ ಸಿದರು 14ನೆಯ ಶತಮಾನದಲ್ಲಿ ಮುಸಲ್ಮಾನರು ದ್ವಾರಸಮುದ್ರವನ್ನು ಹಾಳುಮಾಡಿ, ಬಳಿಕ ತೊಂಡನೂರು, ಮೇಲುಕೋಟೆಯ ಪ್ರದೇಶಗಳನ್ನು ಕೊಳ್ಳೆಹೊಡೆದು, ಜನಭರಿತವಾದ ಮೇಲುಕೋಟೆಯನ್ನು ಹಾಳುಮಾಡಿದ ರೆಂದು ಕಂಡುಬರುವುದು. ಈಗ ನಮ್ಮನ್ನು ಧರ್ಮದಿಂದ ಆಳುವ ಖಾವಂದ ರವರ ವಂಶೀಕರು 14ನೆಯ ಶತಮಾನದಲ್ಲಿ ಉತ್ತರದೇಶದ ದ್ವಾರಕೆಯಿಂದ ಬಂದು ನಂಜನಗೂಡಿನಲ್ಲಿ ನೆಲಸಿದರೆಂದು ಕಂಡುಬರುತ್ತದೆ. ಶ್ರೀ ಯದು ರಾಯರು ನಮ್ಮ ಶ್ರೀಮನ್ಮಹಾರಾಜರವರ ವಂಶದ ಮೂಲಪುರುಷರು. ಶ್ರೀ ಯದುರಾಯರು ತಮ್ಮ ತಮ್ಮಂದಿರು ಕೃಷ್ಣರಾಯರೊಡನೆ ಸುಮಾರು 530 ವರುಷಗಳ ಹಿಂದೆ ನಮ್ಮ ಸೀಮೆಗೆ ದಯಮಾಡಿಸಿದರೆಂದೂ, ಶ್ರೀ ಯದುರಾಯರು ಹದಿನಾಡೆಂಬ ಸ್ಥಳದಲ್ಲಿ ಆಳುತ್ತಿದ್ದ ಚಾಮರಾಜರ ಮಗ ಳನ್ನು ಮದುವೆಯಾಗಿ, ನಂತರ ಮಾವಂದಿರವರ ಬಿರುದಾದ "ಒಡೆಯರು" ಎಂಬುವನ್ನು ತಮ್ಮ ಹೆಸರಿನ ಜೊತೆಗೆ ಸೇರಿಸಿಕೊಂಡು ಆಡಳಿತವನ್ನು ನಡೆ ಸುತಲಿದ್ದರು. ಇವರು ಯದುವಂಶದ ಶ್ರೀ ಕೃಷ್ಣನ ಸಂತತಿಗೆ ಸೇರಿದವರು. ತರುವಾಯ ಹಿರೀಬೆಟ್ಟದ ಚಾಮರಾಜ ಒಡೆಯರವರು, ತಿಮ್ಮರಾಜ ಒಡೆಯ ರವರು ಮುಂತಾದ ಯದುವಂಶದರಾಜರು ಪ್ರಜಾನುರಾಗವುಳ್ಳವರಾಗಿಯೂ, ದೈವಭಕ್ತರಾಗಿಯೂ ಇದ್ದುಕೊಂಡು, ತಮ್ಮ ರಾಜ್ಯವನ್ನು ದಿನೇ ದಿನೇ ಅಭಿವೃದ್ಧಿಗೆ ತರಲು ಉಪಕ್ರಮಿಸಿದರು. ಇವರ ತರುವಾಯ ರಾಜಒಡೆಯ ರವರು 1574 ರಿಂದ 1617 ರ ವರಿಗೆ ಆಳಿ, ಪಾಳಯಗಾರರನ್ನು ಗೆದ್ದು ತಮ್ಮ ದೇಶಕ್ಕೆ ಅನೇಕ ನಾಡುಗಳನ್ನು ಸೇರಿಸಿಕೊಂಡರು. ಇವರ ಕಾಲ ದಲ್ಲಿ ಶ್ರೀರಂಗಪಟ್ಟಣವು ವಿಜಯನಗರದ ಅರಸರಿಗೆಸೇರಿತ್ತು. ಆಗ ಇವರ

ಕಡೆ ಶ್ರೀರಂಗರಾಯನೆಂಬ ಅಧಿಕಾರಿಯು ಆಳುತ್ತಲಿದ್ದನು ಇವನಿಂದ ರಾಜಒಡೆಯರವರು ಶ್ರೀರಂಗಪಟ್ಟಣವನ್ನು ಪಡೆದು ಅದನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡರು ಸುಮಾರು 3 ಶತಮಾನಗಳ ಪರ್ಯಂತರ ಇದೇ ರಾಜಧಾನಿಯಾಗಿದ್ದಿತು. ಇವರ ಆಳ್ವಿಕೆಯಲ್ಲಿ ಮುಸಲ್ಮಾನರಿಂದ ಕೊಳ್ಳೆ ಹೊಡೆಯಲ್ಪಟ್ಟ ಅನೇಕ ದೇವಸ್ಥಾನಗಳೂ ಜೀರ್ಣೋದ್ಧಾರ ಹೊಂದಿದವು ಇವುಗಳ ಪೈಕಿ ಮೇಲುಕೋಟೆಯೂ ಒಂದಾಗಿದೆ. ಈ ಪ್ರಭುಗಳು ಈ ದೇವಸ್ಥಾನಕ್ಕೆ ಮಾನ್ಯವಾಗಿ ಜಮೀನುಗಳನ್ನೂ, ರತ್ನಾಭರಣಗಳನ್ನೂ ದಯಪಾಲಿಸಿದರು ಇಲ್ಲಿಯ ಚಲುವರಾಯಸ್ವಾಮಿಗೆ, ವೈರಮುಡಿಯಂತೆ ಮತ್ತೊಂದು ರತ್ನಖಚಿತವಾದ ದಿವ್ಯಕಿರೀಟವನ್ನು ಮಾಡಿಸಿ ಕೊಟ್ಟರು. ಈಗಲೂ ವರ್ಷಕ್ಕೊಂದಾವರ್ತಿ ರಾಜಮುಡಿಯನ್ನೇ ಶ್ರೀ ಶಲ್ವ ಪಿಳ್ಳೆಯವರಿಗೆ ಸಂವತ್ಸರೋತ್ಸವವು ನಡೆಯುತ್ತಿರುವುದು ಸರ್ವ ವಿದಿತವಾಗಿದೆ. ಇವರ ಮುಮ್ಮಕ್ಕಳಾದ ಚಾಮರಾಜ ಒಡೆಯರವರು 1617 ರಿಂದ 1737 ರ ವರೆಗೂ, ಇಮ್ಮಡಿರಾಜಒಡೆಯರವರು 1637 ರ ರಿಂದ 38 ರ ವರೆಗೂ, ಕಂಠೀರವ ನರಸರಾಜ ಒಡೆಯರವರು 1638 ರಿಂದ 59 ರವರೆಗೂ ಆಳಿದರು. ಕಂಠೀರವ ನರಸರಾಜ ಒಡೆಯರವರ ಕಾಲದಲ್ಲಿ ಕಂಠೀರಾಯ ವರಹವೆಂಬ ನಾಣ್ಯಗಳು ಟಂಕಸಾಲೆಯಲ್ಲಿ ಅಚ್ಚಾದವು. ಇವರು ದೈವ ಭಕ್ತರಾಗಿ, ಪ್ರಜಾನುರಾಗಕ್ಕೆ ಪಾತ್ರರಾಗಿದ್ದರು. ತರುವಾಯ ದೊಡ್ಡ ದೇವರಾಜ ಒಡೆಯರವರು 1659 ರಿಂದ 12 ರವರೆಗೂ, ಚಿಕ್ಕದೇವರಾಜ ಒಡೆಯರವರು 1672 ರಿಂದ 1704ರ ವರೆಗೂ ಆಳಿದರು. ಚಿಕ್ಕದೇವರಾಜ ಒಡೆಯರವರು 32 ವರುಷಗಳಕಾಲ ರಾಜ್ಯವನ್ನಾಳಿ, ಮೈಸೂರು ರಾಜ್ಯವನ್ನು ವಿಸ್ತರಿಸಿ ಮೊಗಲ್ ಮತ್ತು ಮಹಾರಾಷ್ಟ್ರದ ರಾಜರುಗಳಿಂದ ಅತ್ಯಂತ ಕೀರ್ತಿಯನ್ನು ಹೊಂದಿದರು. ಇವರು ಧರ್ಮದಿಂದ ರಾಜ್ಯವನ್ನಾಳಿ ದೇಶದ ಏಳಿಗೆಯನ್ನು ಹೆಚ್ಚಿಸಿದರು. ಈ ಮಹನೀಯರು ಶ್ರೀ ವೈಷ್ಣವ ದೀಕ್ಷೆಯನ್ನು ಅಂಗೀಕರಿಸಿ ಶ್ರೀ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಚಾರಕ್ಕೆ ಬೇಕಾದ ಸೌಕರ್ಯವನ್ನು ಕಲ್ಪಿಸಿ, ಅನೇಕ ವೈಷ್ಣವಾಲಯಗಳನ್ನು ಜೀರ್ಣೋದ್ಧಾರ ಮಾಡಿದರು. ಇವರ ತರುವಾಯ 1704 ರಿಂದ 1831 ರ ವರಗೆ ಪಟ್ಟಕ್ಕೆ ಬಂದ ರಾಜಮನೆತನದವರು ಶಕ್ತರಾಗಿರಲಿಲ್ಲವಾಗಿ, ಆರ್ಕಾಟಿನ ನವಾಬನು

ಮರಾಟಿಯವರು, ಹೈದರಾಬಾದು ನೈಜಾಮನು ಮುಂತಾದವರು ಈ ದೇಶಕ್ಕೆ ದಂಡೆತ್ತಿ ಬಂದು, ದೇಶಾದಾಯವನ್ನು ಅಪಹರಿಸಿಕೊಂಡು ಹೋದರು ಆಗ ಮೈಸೂರಿನ ಸೈನ್ಯದಲ್ಲಿ ಪ್ರಮುಖನಾಗಿದ್ದ ಹೈದರಲ್ಲಿಖಾನನು ಪ್ರಬಲನಾಗಿ, ದಳವಾಯಿಗಳ ಅಧೀನದಲ್ಲಿದ್ದ ರಾಜ್ಯವನ್ನು 1769 ರಿಂದ 82 ರವರೆಗೆ ಕೈಸೇರಿಸಿಕೊಂಡನು. ಹೈದರನು ಮೈಸೂರು ಎರಡನೆಯ ಯುದ್ಧದಲ್ಲಿ (1782) ಕಾಲವಾದನು ನಂತರ ಇವನಮಗ ಟಿಪ್ಪುಸುಲ್ತಾನನು 1782 ರಿಂದ 1799 ರ ವರೆಗೆ ಜನಗಳ ಪ್ರೇಮಕ್ಕೆ ಪಾತ್ರನಾಗದೆ, ರಾಜ್ಯವನ್ನಾಳಿ, ಕೊನೆಗೆ 1799 ರಲ್ಲಿ ಇಂಗ್ಲೀಷಿನವರಿಂದ ಶ್ರೀರಂಗಪಟ್ಟಣದ ಯುದ್ಧದಲ್ಲಿ ಮಡಿದನು. 1785 ರಲ್ಲಿ ಟಿಪ್ಪುಸುಲ್ತಾನನು ಈ ದೇವಸ್ಥಾವಕ್ಕೆ ಕೆಲವು ಆನೆಗಳನ್ನು ಉಚಿತವಾಗಿ ಕೊಟ್ಟಿದ್ದನೆಂದು ತಿಳಿಯಬರುವುದು. ಟಿಪ್ಪು ಸುಲ್ತಾನನು ರಾಜವರ್ಗದವರನ್ನು ಸೆರೆಯಲ್ಲಿಟ್ಟು, ರಾಜ್ಯದಲ್ಲಿಯ ಹಿಂದೂ ಪ್ರಜೆಗಳನ್ನು ಅನೇಕ ವಿಧವಾಗಿ ಹಿಂಸಿಸುತಲಿದ್ದನು. ಇಂಗ್ಲೀಷಿನವರು ತಮಗೆ ಸಹಾಯಮಾಡಿದ, ನಮ್ಮದೇಶದ ಮಹಾರಾಣಿಯವರಾದ ಲಕ್ಷ್ಮಮ್ಮ ಣ್ಣಿಯವರ ಸಾಹಸಕ್ಕೆ ಕನಿಕರಗೊಂಡು, ಅವರನ್ನು ಪುರಸ್ಕರಿಸಿ, ಅವರ ಇಷ್ಟದಂತೆ ಮೈಸೂರು ರಾಜ್ಯವನ್ನು ಖಾಸಾ ಚಾಮರಾಜ ಒಡೆಯರವರ ಮಕ್ಕಳಾದ ಮೈನರ್ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೆ 1800ರಲ್ಲು ಕೊಟ್ಟರು. ಇವರು ಮೈಸೂರನ್ನು ರಾಜಧಾನಿಯಾಗಿ ಮಾಡಿಕೊಂಡು 1831 ರ ವರೆಗೆ ವಿವೇಕದಿಂದ ರಾಜ್ಯಾಧಿಕಾರವನ್ನು ನಡೆಸಿದರು. ಆದರೂ ಇವರಿಗೆ ಸಹಾಯಕರಾಗಿದ್ದ ಅಧಿಕಾರಿಗಳ ಅಚಾತುರ್ಯದಿಂದ ರಾಜ್ಯದ ಬಿಗಿತಪ್ಪಿ, ಅಲ್ಲಲ್ಲಿ ದರೋಡೆ, ದಂಗೆಗಳು ಹೆಚ್ಚಿದವು. ಆದುದರಿಂದ ಘನ ವಾದ ಇಂಗ್ಲೀಷ್ ಸರ್ಕಾರದವರು 1831 ರಿಂದ 1881 ರ ವರೆಗೆ ತಮ್ಮ ವಿಚಾರಣೆಯಲ್ಲಿ ಇಟ್ಟುಕೊಂಡಿದ್ದು, 1881 ರಲ್ಲಿ ಶ್ರೀ ಚಾಮರಾಜ ಒಡೆ ಯರ್ ಜಿ ಸಿ. ಯಸ್. ಐ. ರವರರಿಗೆ, ಮೈಸೂರು ರಾಜ್ಯಭಾರವನ್ನು ಒಪ್ಪಿ ಸಿದರು ಈ ಮಹಾಪ್ರಭುಗಳು ಬುದ್ಧಿಶಾಲಿಗಳಾದ ಮಂತ್ರಿಗಳ ಸಹಾಯ ದಿಂದಲೂ, ಪ್ರಜಾಪ್ರತಿನಿಧಿಸಭೆಗಳ ಮೂಲಕವೂ, ಪ್ರಜಾನುರಾಗಕ್ಕೆ ಪಾತ್ರರಾಗಿ 1894 ರ ವರೆಗೆ ಆಳಿ, ಘನತೆಯನ್ನು ಪಡೆದರು. ಇವರು ಆ ಗಾಗ ದೇಶ ಸಂಚಾರ ಮಾಡುತ್ತ ಜನಗಳ ಕಷ್ಟಸುಖಗಳನ್ನು ಚೆನ್ನಾಗಿ,

ಅರಿತು, ಸಂಸ್ಥಾನದ ಲೋಪ, ದೋಷಗಳನ್ನು ಸರಿಪಡಿಸುತ್ತ, ದೈವ ಭಕ್ತಿಯಲ್ಲಿಯೂ ನಿರತರಾಗಿದ್ದರು ಈ ಮಹನೀಯರು ಸ್ವರ್ಗಸ್ಥರಾದಮೇಲೆ ಈಗ ನಮ್ಮನ್ನಾಳುವ ಖಾವಂದರವರಾದ ಶ್ರೀಮತ್ ಮಹಾರಾಜಾ ಸಾಹೇಬರವರಾದ ಸರ್ ಶ್ರೀ ಕೃಷ್ಣರಾಜ ಒಡೆಯರ್ ಜಿ., ಸಿ. ಯಸ್, ಐ, ಜಿ, ಸಿ, ಬಿ, ಇ, ಬಹದ್ದೂರ್ರವರು 1895 ರಲ್ಲಿ ಪಟ್ಟಾಭಿಷಿಕ್ತರಾದರು ಆಗ ಮಹಾಸ್ವಾಮಿಗಳು ಬಾಲಕರಾಗಿದ್ದುದರಿಂದ, ಮಹಾ ಮಾತೃ ಶ್ರೀಯವರು ಸಂಸ್ಥಾನದ ಆಡಳಿತವನ್ನು ಚನ್ನಾಗಿ ವಿಮರ್ಶೆಯಿಂದ ನಡೆಸಿಕೊಂಡು, 1902 ರಲ್ಲಿ ಸರ್ವೋತ್ತಮವಾದ ಗುಣಗಳಿಂದ ಕೂಡಿದ ನಮ್ಮ ಖಾವಂದರವರಿಗೆ ರಾಜ್ಯಾಧಿಕಾರವನ್ನು ವಹಿಸಿದರು ನಮ್ಮ ಮಹಾಸ್ವಾಮಿಗಳು ರಾಜ್ಯಾಡಳಿತವನ್ನು ಕುಂದು ಕೊರತೆ ಇಲ್ಲದೆ ಅವಿಚ್ಛಿನ್ನವಾಗಿ ನಡೆಸಿಕೊಂಡು, ರಾಜರ್ಷಿಗಳೆಂದು ಕರೆಯಲ್ಪಡುತ್ತ ದೇವರಲ್ಲಿ ಅತ್ಯಂತ ಭಕ್ತಿಯುತರಾಗಿ ಆಳುತ್ತಲಿರುವುದು ಈಗ ಸಕಲರಿಗೂ ತಿಳಿದ ಅಂಶವಾಗಿದೆ. ಪ್ರಕೃತ, ಯಾತ್ರಾಸ್ಥಳವಾಗಿಯೂ, ಪುರಾಣಪ್ರಸಿದ್ಧವಾಗಿಯೂ ಇರುವ ಶ್ರೀ ತಿರುನಾರಾಯಣಪುರವು (ಮೇಲುಕೋಟೆ) ಯಾದವ ವಂಶದ ರಾಜರುಗಳಿಂದ ಪರಿಪಾಲಿಸಲ್ಪಟ್ಟು, 1399 ನೆಯ ಇಸವಿಯಿಂದ ನಮ್ಮ ಖಾವಂದರವರ ಮೂಲಪುರುಷರಾದ ಯದುರಾಜರು ಮೊದಲುಗೊಂಡು, ಈಗಿನವರೆಗೂ ಯಾವ ನ್ಯೂನತೆಯೂ ಇಲ್ಲದಂತೆ ತಮ್ಮಿಂದ ನೇಮಿಸಲ್ಪಟ್ಟ ಸರಕಾರದ ಪ್ರತಿನಿಧಿಗಳಿಂದ ಸರಿಯಾದ ಸ್ಥಿತಿಯಲ್ಲಿ ತರಲ್ಪಟ್ಟು ಉತ್ತಮಸ್ಥಿತಿಯಲ್ಲಿ ಕಂಗೊಳಿಸುತ್ತಿರುವುದು. ನಮ್ಮನ್ನಾಳುತ್ತಿರುವ ಶ್ರೀಮನ್ಮಹೀಶೂರ ಪುರವರಾಧೀಶ್ವರರಾದ ಶ್ರೀಮತ್ ಮಹಾರಾಜಾ ರಾಜಾಸಾಹೇಬ್ ಬಹದ್ದೂರ್ರವರು ನಮ್ಮ ಭರತ ಖಂಡದಲ್ಲಿಯ ಪವಿತ್ರಗಳಾದ ಕ್ಷೇತ್ರಗಳಿಗೆ ಯಾತ್ರಾರ್ಥಿಗಳಾಗಿ ಹೋಗಿ, ದಿವ್ಯ ದೇಶಗಳನ್ನೂ ದಿವ್ಯ ತೀರ್ಥಗಳನ್ನೂ ದಿವ್ಯ ಕ್ಷೇತ್ರಗಳನ್ನೂ ಪದೇಪದೇ ಸಂದರ್ಶಿಸಿ ಬರುತ್ತಲೂ, ಅದರಂತೆ ನಮ್ಮ ಸಂಸ್ಥಾನದಲ್ಲಿಯೂ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿ, ಆಚಂದ್ರಾರ್ಕ ಸೇವೆ ನಡೆಯಲು, ದೇವರ ಕೆಲಸಗಳಿಗೆ ತಕ್ಕ ಏರ್ಪಾಡುಗಳನ್ನು ಮಾಡಿ, ತಾವೂ ಖಾಸಾ ಪರಾಂಬರಿಸಿ, ಭಕ್ತಿಯುತರಾಗಿ ಸೇವೆ ಮಾಡುತ್ತಲಿರುವುದು ಪ್ರಜಾಸಾಮಾನ್ಯಕ್ಕೆ ತಿಳಿದ ವಿಷಯವಾಗಿದೆ ನಮ್ಮ ಖಾವಂದರವರು

ಹಾಕಿದ ಮೇಲ್ಪಂಗ್ತಿಯನ್ನು ಅನುಸರಿಸಿ, ಪ್ರಜೆಗಳಾದ ನಾವೂ ಕೂಡ, ದೇವರ ಸೇವೆಯಂ ಮಾಡಿ ಕೃತಾರ್ಥರಾಗಬೇಕೆಂಬ ವಿಷಯವನ್ನು ಒತ್ತಿ ಹೇಳಬೇಕಾದುದಿಲ್ಲವು. ಅತ್ಯಂತ ಯಶಸ್ವಿರಾದ ಈ ಮಹಾಪ್ರಭುವರೇಣ್ಯರು ಶ್ರೀಮನ್ನಾರಾಯಣನ ಕೃಪೆಗೆ ಪಾತ್ರರಾಗಿ, ದೇವತಾಸೇವೆಯನ್ನು ಪುನಃ 26-2-1934 ರಲ್ಲಿ ಮಾಡಿದಂತೆ, ಇನ್ನೂ ಅತಿಶಯವಾಗಿ ದೂಡಿಕೊಂಡು, ಚಿರಕಾಲ ಧರ್ಮದಿಂದ ಪ್ರಜಾ ಪರಿಪಾಲನವನ್ನು ಮಾಡಿಕೊಂಡುಬರಲು ನಮ್ಮನ್ನಾಳುವ ಮಹಾಸ್ವಾಮಿಯವರಿಗೂ, ಅವರ ಪೋಷ್ಯ ವರ್ಗಕ್ಕೂ ಸಮಸ್ತ ಕಲ್ಯಾಣಗುಣ ವಿಶಿಷ್ಟನಾದ ಶ್ರೀ ಶಲ್ವತಿರುನಾರಾಯಣನು, ಆಯು ರಾರೋಗ್ಯ ಮತ್ತು ಅ ಮೃ ತೈ ಶ್ವ ಯ ರ್ ಗ ಳ ನ್ನು ಅನುಗ್ರಹಿಸಲೆಂದು ಪ್ರಾರ್ಥನೆಯು.

ಸಮಸ್ತ ಸನ್ಮಂಗಳಾನಿ ಭವಂತು.

---

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ನಿಗಮಾನ್ತಮಹಾದೇಶಿಕಾಯ ನಮಃ

ಶ್ರೀ ನಾರಾಯಣದೇವಾಯ ಮಂಗಳಾಧಾರಮೂರ್ತಯೆ ।
ಶ್ರುತಿರಾಜೇನ ದೃಷ್ಟಾಯ ವಲ್ಮೀಕಸ್ಥಾಯ ಮಂಗಳಮ್ ॥೧॥

ನಾರಾಯಣಾದ್ರಿನಾಥಾಯ ಬ್ರಹ್ಮಾರಾಧನತುಷ್ಟಯೇ (ರಾಧಿತಮೂರ್ತಯೇ)
ಕೃತಾಖ್ಯಯುಗನಾಥಾಯ ಕೃತಾರಾಧ್ಯಾಯಾಸ್ತು ಮಂಗಳಮ್ ॥೨॥

ತ್ರೇತಾಯುಗಾದಿನಾಥಾಯ ವೇದಾದ್ರಿರಮಣಾಯ ವೈ ।
ಸನತ್ಕುಮಾರಪೂಜ್ಯಾಯ ಶ್ರೀಭೂದೇವಾಯ ಮಂಗಳಂ ॥೩॥

ರಾಮಕೃಷ್ಣಾದಿಪೂಜ್ಯಾಯ ಯಾದವಾಚಲವಾಸಿನೇ ।
ದ್ವಾಪರಾಖ್ಯಯುಗೇಶಾಯ ದ್ವಾಪರಾನ್ತಾಯ ಮಂಗಳಂ ॥೪॥

ಕಲ್ಯಾಖ್ಯಯುಗನಾಥಾಯ ಕಲಿಕಲ್ಮಷನಾಶಿನೇ ।
ರಾಮಾನುಜಯತೀಶೇನ ಪೂಜಿತಾಯಾಸ್ತು ಮಂಗಳಂ ॥೫॥

ಪತಿತಾರ್ಣಪಾವಯಿತ್ರೇಚ ಯತಿಶೈಲನಿವಾಸಿನೇ ।
ಸಂಪತ್ಸುವಾರಯುಕ್ತಾಯ ಸಂಪದ್ಧಾತ್ರೇಽಸ್ತುಮಂಗಳಂ ॥೬॥

ಪದ್ಮಪಾದಾಯಪೂಜ್ಯಾಯ ಜಂಘಾಕಾಹಳಿಕಾತ್ಮನೇ ।
ಮಂಗಳಂದೇವದೇವಾಯ ದರ್ಪಣಾಕಾರಜಾನವೇ ॥೭॥

ರಂಭೋರವೇರವಾಕಾಂತಪೀತಾಂಬರಧರಾಯತೇ ।
ವಿಶಾಲವಕ್ಷಸೇ ಶ್ರೀಶ ಶ್ರೀನಾರಾಯಣಮಂಗಳಂ ॥೮॥

ಶ್ರೀವತ್ಸಕೌಸ್ತುಭೋರಸ್ಕ ಮುಕ್ತಾಹಾರವಿರಾಜಿತ ।
ಕಂಬುಕಂಠಾಯ ವೈಕುಂಠವರ್ಧನಸ್ಥಾಯಮಂಗಳಂ ॥೯॥

ಪುಂಡರೀಕವಿಶಾಲಾಕ್ಷ ಕರುಣಾಪೂರ್ಣದೃಷ್ಟಯೇ ।
ಲಲಾಟರಾಜತ್ಪುಂಡ್ರಾಯ ಭ್ರೂಚಾಪಾಯಾಸ್ತುಮಂಗಳಂ ॥೧೦॥

ಕಿರೀಟಹಾರಕೇಯೂರ ಕಟಕಾದಿವಿಭೂಷಿತ ।
ಶ್ರೀನಾರಾಯಣದೇವಾಯ ತುಭ್ಯಂದೇವೇಶಮಂಗಳಂ ॥೧೧॥

ಕಲ್ಯಾಣತೀರ್ಥನಾಥಾಯ ವೇದಪುಷ್ಕರಿಣೀಪತೇ ।
ದರ್ಭಯಾದವತೀರ್ಧೇಶ ಮಂಗಳಂತೇ ರಮಾಪತೇ ॥೧೨॥

ಪಲಾಶಪದ್ಮತೀರ್ಥೇಶ(ರ್ಧಾದಿ)ಬಹುತೀರ್ಥೇಶಪಾವನ ।
ವೈಕುಂಠತೀರ್ಥನಾಥಾಯ ಯತಿಶೈಲೇಶಮಂಗಳಂ ॥೧೩॥

ಶ್ರೀನಾರಾಯಣದೇವಾಯ ಸಂಪತ್ಪುತ್ರಯುತಾಯತೇ ।
ಯತಿಶೈಲೇಶಪೂಜ್ಯಾಯ ಯತಿರಾಜೇನಮಂಗಳಂ ॥೧೪॥

ಚತುರ್ದಶಭಿರೇತೈಸ್ತು ಚತುರ್ದಶಜಗತ್ಪತಿಃ ।
ಚತರ್ವರ್ಗಫಲಂದಾತುಂ ಪ್ರೀತೋಭವ್ಯಾದ್ಧಿಮಂಗಳಂ ॥



PRINTED AT SREE SHARADAVILASA PRESS ARSIKERE.